# ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೪೦

# ಸಹಕಾರ

ಎಸ್. ಗೋಪಾಲಸ್ವಾಮಿ, ಎಂ.ಎ.




ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
ಮೈಸೂರು
೧೯೪೩

ಬೆಲೆ: ೩ ಆಣೆ

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೪೦

# ಸಹಕಾರ

ಎಸ್. ಗೋಪಾಲಸ್ವಾಮಿ, ಎಂ.ಎ.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೩

# ಮುನ್ನುಡಿ

ಈ ಪ್ರಚಾರಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚು ವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರ್ ಪದವಿಯಿಂದ ಈಗತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು;

ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವು ದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದು ಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು ಮುಗಿಸು ವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾ ದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿ ದವರಿಗೆ ಮಾತ್ರ ಗೊತ್ತಾಗಬಲ್ಲುದು. ಮೈಸೂರು ವಿಶ್ವವಿದ್ಯಾ ನಿಲಯದ ಪ್ರಚಾರಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು,

ತಾ|| ೨೪-೪-೧೯೪೨.

**ಇ. ಜಿ. ಮೆಕಾಲ್ಪೈನ್**

ವೈಸ್-ಛಾನ್ಸೆಲರ್

# ಬಿನ್ನಹ

ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಆಶ್ರಯದಲ್ಲಿ ನಾನು ಅರಕಲಗೂಡಿನಲ್ಲಿ ಕೊಟ್ಟ ಉಪನ್ಯಾಸಗಳ ಆಧಾರದ ಮೇಲೆ ಬರೆದ ಲೇಖನವಿದು. ೧೯೩೯ರಲ್ಲಿ ಈ ವಿಷಯವನ್ನು ಕುರಿತು ಆಕಾಶವಾಣಿಯು ಬೆಂಗಳೂರು ಕೇಂದ್ರದಿಂದ ನಾನು ಮಾಡಿದ ಭಾಷಣಗಳ ಹಲವು ಭಾಗಗಳು ಇಲ್ಲಿ ಅಡಗಿರುವುವು. ಅವುಗಳಲ್ಲಿ ಸ್ವಲ್ಪಭಾಗ ಅದೇವರ್ಷ ಒಂದೆರಡು ಪತ್ರಿಕೆಗಳಲ್ಲೂ ಪ್ರಕಟವಾಗಿದೆ. ನನಗೆ ಅನೇಕ ವಿಧವಾಗಿ ಉತ್ತೇಜನಕೊಟ್ಟ ಆಕಾಶವಾಣಿಯ ಡೈರೆಕ್ಟರಾದ ಡಾ॥ ಎಂ. ವಿ. ಗೋಪಾಲ ಸ್ವಾಮಿ ಅವರಿಗೆ ನನ್ನ ವಂದನೆಗಳು ಸಲ್ಲತಕ್ಕದ್ದಾಗಿದೆ. ಈ ಲೇಖನದ ಕೊನೆಯಲ್ಲಿ ಕೊಟ್ಟಿರುವ "ಸಹಕಾರಗೀತ" ವನ್ನು ಉಪಯೋಗಿಸಿಕೊಳ್ಳಲು ನನಗೆ ಅನುಮತಿಯನ್ನಿತ್ತುದಕ್ಕಾಗಿ ನಾನು ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರನ್ನು ವಂದಿಸುತ್ತೇನೆ.

ಇದರ ಹಸ್ತಪ್ರತಿಯನ್ನು ನನ್ನೊಡನೆ ಓದಿ ನನಗೆ ಸಲಹೆಗಳನ್ನಿತ್ತು ಅನೇಕ ವಿಧದಲ್ಲಿ ಸಹಾಯ ಮಾಡಿದ ನನ್ನ ಮಾನ್ಯ ಮಿತ್ರರೂ ಜತೆಯ ಕೆಲಸಗಾರರೂ ಆದ ಶ್ರೀಮಾನ್ ಜಿ. ಹನುಮಂತರಾಯರಿಗೆ ನಾನು ಚಿರಋಣಿ.

ಮೈಸೂರು,
ತಾ॥ ೫-೬-೧೯೪೨.

ಎಸ್. ಜಿ.

# ವಿಷಯಾನುಕ್ರಮಣಿಕೆ



ಶ್ರೀಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಅವರು

(೧೮೮೮-೧೯೪೦)

(ಶ್ರೀಮನ್ಮಹಾರಾಜರವರ ಹುಜೂರ್ ಸೆಕ್ರಿಟರಿಯವರ ಕೃಪೆಯಿಂದ)




ರಾಬರ್ಟ್ ಒವನ್

೧೭೭೧–೧೮೫೮

# ಸಹಕಾರ

## ೧. ವಿಷಯಪರಿಚಯ

"ಸಹಕಾರ" ಎಂಬ ಪದಕ್ಕೆ ಸಾಮಾನ್ಯ ಅರ್ಥ ಒಟ್ಟುಗೂಡಿ ಕೆಲಸಮಾಡುವುದು ಎಂದು. ಒಟ್ಟುಗೂಡಿ ಕೆಲಸಮಾಡುವುದು ಪ್ರಕೃತಿ ರಚನಾವಿಶೇಷಗಳಲ್ಲಿ ಒಂದು. ಇರುವೆ ಮತ್ತು ಜೇನುಹುಳುಗಳ ಜೀವನವು ಪ್ರಾಣಿವರ್ಗದಲ್ಲಿ ಕಂಡುಬರುವ ಸಹಕಾರಕ್ಕೆ ಉತ್ತಮ ನಿದರ್ಶನ. ಮಾನವಜೀವನದಲ್ಲಿ, ಮುಖ್ಯವಾಗಿ ಆರ್ಥಿಕಜೀವನದಲ್ಲಿ, ಸಹಕಾರದ ಉಪಯೋಗವು ಸ್ಪಷ್ಟವಾಗಿ ಕಾಣುವುದು. ಆದರೂ ಇದು ವ್ಯವಸ್ಥಿತವಾದ ರೂಪಕ್ಕೆ ಬಂದುದು ಕೇವಲ ಇನ್ನೂರು ವರ್ಷಗಳಿಂದೀಚೆಗೆ. ಅರ್ಥೋತ್ಪತ್ತಿಗೆ ಯಂತ್ರ, ಮತ್ತು ಕಲ್ಲಿದ್ದಲು ಪೆಟ್ರೋಲ್ ಮುಂತಾದ ಶಕ್ತಿಸಾಧಕಗಳು ನೆರವಾದುದೇ ಇದಕ್ಕೆ ಮುಖ್ಯಕಾರಣ. ಈರೀತಿ ಬದಲಾವಣೆಯಾದಂದಿನಿಂದ ಆರ್ಥಿಕಕ್ರಾಂತಿಯ ಯುಗವು ಆರಂಭವಾಯಿತು. ಹಿಂದೆ ಒಬ್ಬನೋ ಅಥವಾ ಒಂದು ಸಂಸಾರದವರೋ ನಡೆಸುತ್ತಿದ್ದ ಒಂದು ಕೆಲಸವನ್ನು ಈಗ ಅನೇಕ ಭಾಗಗಳಾಗಿ ವಿಂಗಡಿಸಿ ಒಂದೊಂದು ಭಾಗವನ್ನೂ ಹಲವು ಕೆಲಸಗಾರರಿಗೆ ಹಂಚಿ ಯಂತ್ರೋಪಕರಣಗಳ ಸಹಾಯದಿಂದ ಗಿರಣಿಗಳಲ್ಲಿ ನಡೆಸುತ್ತಿರುವರು. ಈ ವಿಧವಾದ ವ್ಯವಸ್ಥೆಯು ಫಲಕಾರಿಯಾಗುವುದು ಸಹಕಾರಬಲದಿಂದ. ಹೀಗೆ ಒಟ್ಟುಕೂಡಿ ಕೆಲಸ ನಡೆಸುವುದು ಇಂದಿನ ಆರ್ಥಿಕಜೀವನದ ತಳಹದಿಯಾಗಿದೆ.

ಇಲ್ಲಿ ಪ್ರಸ್ತಾಪಿಸಬೇಕಾಗಿರುವ "ಸಹಕಾರ"ವು ಈ ಸಾಮಾನ್ಯ ಅರ್ಥವಲ್ಲಲ್ಲ. ಇಲ್ಲಿ "ಸಹಕಾರ" ಎಂದರೆ ಒಂದು ವಿಶೇಷರೀತಿಯಾದ ಆರ್ಥಿಕ ಜೀವನಕ್ರಮ. ಸಹಕಾರ

ಮಾರ್ಗವು ಅರ್ಥ ಮತ್ತು ಧರ್ಮ ಈ ಎರಡು ಪುರುಷಾರ್ಥ ಗಳನ್ನೂ ಒಂದಕ್ಕೊಂದು ವಿರೋಧವಾಗದಂತೆ ಸಮನಾಗಿ ಸಾಧಿಸುವ ಮಾರ್ಗ. ಸಹಕಾರಪದವು "ಸಹಕಾರ ಪದ್ಧತಿ" ಎನ್ನುವ ಅರ್ಥದಲ್ಲಿ ತಿಳಿಯತಕ್ಕುದಾಗಿದೆ.

ಆಧುನಿಕ ಅರ್ಥಶಾಸ್ತ್ರಜ್ಞರು ಆರ್ಥಿಕಜೀವನವ್ಯವಸ್ಥೆಗಳನ್ನು ಮೂರು ರೀತಿಯಾಗಿ ವಿಂಗಡಿಸಿರುವರು. ಅವು ಯಾವುವೆಂದರೆ: ಮೊದಲನೆಯದು ಬಂಡವಾಳಗಾರರ ಪ್ರಭುತ್ವ ಪದ್ಧತಿ; ಎರಡನೆಯದು ಸಹಕಾರ ಪದ್ಧತಿ; ಮೂರನೆಯದು ಸಮಾಜ ಸಮತಾವಾದ ಕ್ರಮ. ಸಹಕಾರ ಪದ್ಧತಿಯ ಮೂಲತತ್ವಗಳು ತಿಳಿಯಬೇಕಾದರೆ ಉಳಿದ ಎರಡು ವ್ಯವಸ್ಥೆಗಳ ನಿಜಸ್ವರೂಪವನ್ನು ತಿಳಿಯಬೇಕಾದುದು ಆವಶ್ಯಕ.

ಬಂಡವಾಳಗಾರರ ಪ್ರಭುತ್ವ ಕ್ರಮದ ಸ್ವರೂಪವು ಅದರ ಹೆಸರಿನಿಂದಲೇ ವಿಶದವಾಗುವುದು. ಬಂಡವಾಳಗಾರರ ಮೇಲ್ಮೆಯೇ ಈ ಪದ್ಧತಿಯ ಮುಖ್ಯಗುರಿ. ದುಡ್ಡೇ ಎಲ್ಲದಕ್ಕಿಂತಲೂ ದೊಡ್ಡದು; ದುಡ್ಡಿದ್ದವನೇ ದೊಡ್ಡಪ್ಪ; ಅದಕ್ಕಾಗಿ ಅಸಾಧ್ಯ ಪೈಪೋಟಿ, ಹೋರಾಟ. ತನ್ನ ಬೊಕ್ಕಸವನ್ನು ಹೇಗೆ ತುಂಬಿಕೊಳ್ಳುವುದು, ದಯಾದಾಕ್ಷಿಣ್ಯವಿಲ್ಲದೆ ಸ್ವಾರ್ಥಸಾಧನೆ ಹೇಗೆ ಮಾಡಿಕೊಳ್ಳುವುದು—ಇವು ವಿನಾ ಮಾನವಕೋಟಿಯ ಶ್ರೇಯಸ್ಸಿನ ಕಡೆಗೆ ಲಕ್ಷ್ಯವೇ ಇಲ್ಲ. ನೂರಾರು ಜನರನ್ನು ದುಡಿಸಿ ಅವರನ್ನು ಮೆತ್ತಗೆಮಾಡಿ ತಾನೊಬ್ಬ ದೊಡ್ಡವನಾಗುವುದು ಬಂಡವಾಳಗಾರನ ರೀತಿ. ಬಂಡವಾಳಗಾರರ ಸಮಾಜದಲ್ಲಿ ಬಡಪಾಯಿಯ ಪಾಡು ನಾಯಿಪಾಡು; ಇತರರ ಲಾಭಸಂಪಾದನೆಗೆ ದುಡಿಯುವುದೊಂದೇ ಸಾಮಾನ್ಯಜನರ ಹಣೆಯಬರಹ.

ಈ ಕ್ರಮದಲ್ಲಿ ತತ್ವಶಃ ಪ್ರತಿಯೊಬ್ಬ ವ್ಯಕ್ತಿಗೂ ಸ್ವಾತಂತ್ರ್ಯದ

ಸುಖವುಂಟು ; ದರಿದ್ರನೂ ಧನಿಕನಾಗುವ ಸಂಭವವುಂಟು. ಆದರೆ ಹೀಗೆ ಪರಿವರ್ತನೆಯಾಗುವುದು ಕೇವಲ ಅಪರೂಪ. ಬಂಡವಾಳವುಳ್ಳ ಬಲಿಷ್ಠರು ದಿನದಿನಕ್ಕೆ ಪ್ರಬಲರಾಗುವರು. ಬಡವರು ದಿನದಿನಕ್ಕೆ ಕ್ಷೀಣದಶೆಗೆ ಇಳಿಯುವ ಸಂಭವವೇ ಹೆಚ್ಚು. ಬಂಡವಾಳಗಾರರ ಸಮಾಜದಲ್ಲಿ ಮಾನುಷ ವ್ಯಕ್ತಿತ್ವಕ್ಕೆ, ಶೀಲಕ್ಕೆ, ಆತ್ಮಗೌರವಕ್ಕೆ ಅಷ್ಟು ಅವಕಾಶವಿಲ್ಲ. ಹಣವಂತನಾದರೆ ಗುಣಹೀನನಾದರೂ ಮರ್ಯಾದೆ; ಧನಹೀನನು ಎಷ್ಟೇ ಶೀಲವಂತನಾದರೂ, ಗುಣಾಢ್ಯನಾದರೂ ಅವನಿಗೆ ಮನ್ನಣೆ ಇಲ್ಲ.

ಆದರೂ ಬಂಡವಾಳಗಾರರ ವ್ಯವಸ್ಥೆಯು ಪ್ರಪಂಚದ ಸಂಪದಭಿವೃದ್ಧಿಗೆ ಸಾಧಕವಾಗಿದೆ. ಬಂಡವಾಳಗಾರರ ಪ್ರಭುತ್ವದ ವ್ಯವಸ್ಥೆಯು ಮೂರು ವಿಧವಾಗಿರಬಹುದು. (೧) ತನ್ನ ಸ್ವಂತ ಬಂಡವಾಳದ ಬಲದಿಂದ ಒಬ್ಬನೇ ಒಂದು ಕೆಲಸ ನಡೆಸುವುದು ; (೨) ನಾಲ್ಕಾರು ಬಂಡವಾಳಗಾರರು ಪಾಲುಗಾರರಾಗಿ ಸೇರಿ ಕೆಲಸ ನಡೆಸುವುದು. (೩) ಅನೇಕ ಜನರಿಂದ ಬಂಡವಾಳವನ್ನು ಸೇರಿಸಿ ಒಂದು ಸಂಸ್ಥೆಯಾಗಿ ಕೆಲಸ ನಡೆಸುವುದು. ಒಂಟಿ ಬಂಡವಾಳಗಾರರೂ ಜಂಟಿ ಬಂಡವಾಳಗಾರರೂ ಎಷ್ಟೇ ಉಪಪತ್ತಿಯುಳ್ಳವರಾದರೂ ಅವರಿಂದ ಈಗಿನ ಕಾಲದ ಆರ್ಥಿಕ ಉದ್ಯಮಗಳಿಗೆ ತಕ್ಕಷ್ಟು ಬಂಡವಾಳವನ್ನೊದಗಿಸುವ ಶಕ್ತಿಯಾಗಲಿ, ಕಾಲಕ್ರಮದಲ್ಲಿ ಆ ಉದ್ಯಮಗಳಿಗೆ ಸಂಭವಿಸಬಹುದಾದ ಕಷ್ಟನಷ್ಟಗಳನ್ನು ನಿಭಾಯಿಸುವ ಚೈತನ್ಯವಾಗಲಿ ಇರುವುದಿಲ್ಲ. ಇವೆರಡು ಶಕ್ತಿಗಳೂ ಮೂರನೆಯದಾದ ಸಾಮೂಹಿಕ ಬಂಡವಾಳ ಸಂಸ್ಥೆಗಳಿಗೆ ಇವೆ. ಆದುದರಿಂದಲೇ ಇವು ಎಲ್ಲೆಲ್ಲೂ ಹರಡಿವೆ ; ಹರಡುತ್ತಲೂ ಇವೆ. ಇವು ಲಕ್ಷಾಂತರ

ಜನರಿಂದ ಹೇರಳವಾಗಿ ಬಂಡವಾಳವನ್ನು ಕೂಡಿಸಿ ಬಹಳ ಭಾರಿ ಉದ್ಯಮಗಳನ್ನು ನಡೆಸಲು ನೆರವಾಗಿವೆ. ಇವಕ್ಕೆ ನಷ್ಟ ಸಂಭವಿಸಿದಾಗ ನಷ್ಟವು ಸಮೂಹದ ಮೇಲೆ ಪಾವಾಷಾ ಮೇರೆ ಅಲ್ಪ ಪ್ರಮಾಣದಲ್ಲಿ ಹಂಚಿ ಬೀಳುವುದರಿಂದ ಒಂಟಿ ಮತ್ತು ಜಂಟಿ ಬಂಡವಾಳಗಾರರ ಸಂಸ್ಥೆಗಳಂತೆ ಕುಸಿದು ಬೀಳುವುದಿಲ್ಲ.

ಈ ಮೂರು ವಿಧವಾದ ಬಂಡವಾಳಗಾರರ ಸಂಸ್ಥೆಗಳು ಎಲ್ಲೆಲ್ಲೂ ಪ್ರಾಮುಖ್ಯಕ್ಕೆ ಬಂದುದು ಪ್ರಪಂಚದ ಆರ್ಥಿಕ ಅಭಿವೃದ್ಧಿಗೆ ಕಾರಣವಾಗಿದ್ದರೂ ಸಾಮಾಜಿಕ ದೃಷ್ಟಿಯಿಂದ ಇವೂ ದುಷ್ಪರಿಣಾಮಕಾರಿಯಾಗಿವೆ. ಬಂಡವಾಳಗಾರರು, ಕೆಲಸಗಾರರು ಎಂಬ ಎರಡು ವಿರೋಧ ಪಂಗಡಗಳಾಗಿ ಕಕ್ಷಿಪ್ರತಿಕಕ್ಷಿಗಳಾಗಿ ಹೋರಾಡುವ ಸನ್ನಿವೇಶವು ಒದಗಿದೆ. ಲಾಭದಲ್ಲಿ ಹದಿನಾರಾಣೆಯ ಭಾಗ ಬಂಡವಾಳಗಾರರಿಗೆ ಸಂದಾಯವಾಗುತ್ತಿರುವುದೇ ಈ ಹೋರಾಟಕ್ಕೆ ಮುಖ್ಯ ಕಾರಣ. ಅವರಿಬ್ಬರಿಗೂ ಪರಸ್ಪರ ವೈಷಮ್ಯವು ದಿನೇ ದಿನೇ ಬೆಳೆಯುತ್ತಿದೆ. ಕೆಲಸಗಾರರ ಬಾಳು ದಿನೇ ದಿನೇ ಕಳೆಗುಂದಿ ಅವರಿಗೆ ಜೀವನದಲ್ಲಿ ಜುಗುಪ್ಸೆ ತಲೆದೋರಿದೆ. ಆದುದರಿಂದ ಕೆಲಸಗಾರರು ಜಾಗೃತಿಗೊಂಡು, ತಮ್ಮನ್ನು ಮೆತ್ತಗೆ ಮಾಡುತ್ತಿರುವ ಬಂಡವಾಳಗಾರರ ಪಾಶದಿಂದ ಬಿಡುಗಡೆ ಹೊಂದಲು ಸಮತಾಭಾವನೆಯುಳ್ಳ ಅಥವಾ ಸಾಮೂಹಿಕ ಹಿತಸಾಧನೆಯೇ ಮುಖ್ಯ ಧ್ಯೇಯವಾಗಿರುವ ಆರ್ಥಿಕ ವ್ಯವಸ್ಥೆಗಳನ್ನು ಈಗ ಸುಮಾರು ಒಂದು ಶತಮಾನದಿಂದ ಏರ್ಪಡಿಸಿಕೊಳ್ಳುತ್ತಿರುವರು. ಇವುಗಳಿಗೆ ಬೇರೆ ಬೇರೆ ಹೆಸರುಗಳಿವೆ. ಇವನ್ನು ಬೇರೆ ಬೇರೆಯಾಗಿ ವಿಮರ್ಶಿಸಬಹುದು. ಇವು ಹೆಚ್ಚು ಕಡಿಮೆ ಸಮಾಜಸಮತಾವಾದದ ಪ್ರಭೇದಗಳೆಂದೆನ್ನಬಹುದು.

ಸಮಾಜಸಮತಾವಾದ ವ್ಯವಸ್ಥೆಯಲ್ಲಿ ಬಂಡವಾಳವು ಹೇರಳವಾಗಿ ಉಪಯೋಗದಲ್ಲಿದ್ದರೂ ಅದು ಬಂಡವಾಳಗಾರರ ಆಧೀನ್ಯಕ್ಕೆ ಒಳಪಟ್ಟಿಲ್ಲ. ಆಸ್ತಿ ವ್ಯಕ್ತಿಗಳದಲ್ಲ. ಒಟ್ಟು ಸಮಾಜದ್ದು. ಇದನ್ನು ಎಲ್ಲರೂ ಸೇರಿ ರೂಢಿಸುವರು; ಆದರಿಂದ ಬಂದ ಫಲವನ್ನು ಎಲ್ಲರೂ ಅನುಭವಿಸುವರು. ಸಾಮೂಹಿಕ ಹಿತವನ್ನು ಗಳಿಸಿ ತನ್ಮೂಲಕ ವ್ಯಕ್ತಿಯ ಹಿತವನ್ನು ಸಾಧಿಸುವುದು ಈ ವ್ಯವಸ್ಥೆಯ ಉದ್ದೇಶ. ಈ ವ್ಯವಸ್ಥೆಯಲ್ಲಿ ವ್ಯಕ್ತಿಗೆ ಸ್ವಾತಂತ್ರ್ಯವಿಲ್ಲ. ಏನು ಮಾಡಬೇಕಾದರೂ ವಿಧಾಯಕವಾದ ಕಟ್ಟುಗಳಿಗೆ ಒಳಗಾಗಿ ಸದಾ ಸಾಮೂಹಿಕ ಮೇಲ್ವಿಚಾರಣೆಯಲ್ಲಿ ಕೆಲಸ ಮಾಡಬೇಕು. ಎಲ್ಲ ಉದ್ಯಮಗಳಿಗೂ ಮೂಲಕಾರಣವಾದದ್ದು ಆತ್ಮಶಕ್ತಿ. ಇದರ ವಿಕಾಸಕ್ಕೆ ಅವಕಾಶವಿಲ್ಲ. ಎಲ್ಲರೂ ಒಂದೇ–ಎಲ್ಲರಿಗೂ ಒಂದೇ ಸೂತ್ರ. ಈ ನಿರ್ಜೀವವಾದ ಸರ್ವಸಮದೃಷ್ಟಿಯು ಮನುಷ್ಯನ ವ್ಯಕ್ತಿತ್ವವನ್ನು ಕಳೆಗುಂದಿಸುವುದು. ಇಂಥಾ ವ್ಯವಸ್ಥೆಯ ಆಧಾರದ ಮೇಲೆ ರಷ್ಯಾದೇಶದವರು ಈಗ ಸುಮಾರು ಇಪ್ಪತ್ತು ವರುಷಗಳಿಂದೀಚೆಗೆ ದೇಶದ ವ್ಯವಸ್ಥೆಯನ್ನು ರೂಪಾಂತರಗೊಳಿಸಿರುವರು. ಈ ವ್ಯವಸ್ಥೆಯಿಂದ ದೇಶವು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಿದೆಯೇ ಎಂಬುದು ವಿವಾದಾಸ್ಪದವಾಗಿದ್ದರೂ ಜನಸಾಮಾನ್ಯದ ಆರ್ಥಿಕ ಸ್ಥಿತಿಯು ಉತ್ತಮಗೊಂಡಿದೆ ಎಂಬುದನ್ನು ಎಲ್ಲರೂ ಒಪ್ಪುವರು.

ಬಂಡವಾಳಗಾರರ ಪ್ರಭುತ್ವಕ್ರಮವೂ ಸಮಾಜಸಮತಾವಾದಕ್ರಮವೂ ಮೂಲತತ್ವಗಳಲ್ಲಿ ಒಂದಕ್ಕೊಂದು ವಿರೋಧವಾಗಿವೆ. ಸಮಾಜಸಮತಾವಾದಕ್ರಮವು ಜನಿಸಿದುದು ಬಂಡವಾಳ ಪ್ರಭುತ್ವಕ್ರಮದ ಪ್ರತಿಕಕ್ಷಿಯಾಗಿ. ಆದುದರಿಂದ ಇವೆರಡರಲ್ಲಿ ಕಂಡುಬರುವ ಪರಸ್ಪರ ವಿರೋಧಭಾವವು ಸ್ವಾಭಾ

ವಿಕವಾದುದು. ಆದರೆ ಈ ಎರಡು ಕ್ರಮಗಳಲ್ಲಿಯೂ ಗುಣ ದೋಷಗಳಿವೆ. ಇವೆರಡರಲ್ಲಿನ ದೋಷಗಳನ್ನೆಲ್ಲಾ ತ್ಯಜಿಸಿ, ಗುಣಗಳನ್ನು ಗ್ರಹಿಸುವ ಮಾಧ್ಯಮಿಕಮಾರ್ಗ ಸಹಕಾರಮಾರ್ಗ.

ಬಂಡವಾಳಕ್ರಮದಂತೆಯೇ ಸಹಕಾರಕ್ರಮದಲ್ಲೂ ಆಸ್ತಿಯನ್ನು ಊರ್ಜಿತಪಡಿಸಲು ಅವಕಾಶವಿದೆ. ಆದರೆ, ಬಂಡವಾಳ ಪ್ರಭುತ್ವಕ್ರಮದಲ್ಲಿರುವಂತೆ ವಿನಾಶಕರವಾದ ಪೈಪೋಟಿಯಿಲ್ಲ. ವ್ಯಕ್ತಿಸ್ವಾತಂತ್ರ್ಯವಿದ್ದರೂ ಒಟ್ಟುಗೂಡಿ ಕೆಲಸಮಾಡಲು ಅಡಚಣೆಯಿಲ್ಲ; ಸರ್ವ ಸಮಭಾವನೆಗೂ ಸ್ವಲ್ಪಮಟ್ಟಿಗೆ ಅವಕಾಶವುಂಟು. ಆರ್ಥಿಕ ಉದ್ಯಮಗಳಲ್ಲಿ ಶೀಲವಂತರಾದ ಧನಿಕರೂ ಬಡವರೂ ಒಟ್ಟುಗೂಡಿ, ಯಾರೊಬ್ಬರ ಹಕ್ಕುಬಾಧ್ಯತೆಗಳಿಗೂ ಚ್ಯುತಿಬಾರದಂತೆ ಪರಸ್ಪರ ಬೆಂಬಲದಿಂದ ಕೆಲಸಮಾಡಲು ಅವಕಾಶವಿದೆ. ಒಗ್ಗಟ್ಟೇ ಸಹಕಾರಪದ್ಧತಿಯ ಮೂಲಮಂತ್ರ. ಒಬ್ಬನಿಗಾಗಿ ಎಲ್ಲರೂ, ಎಲ್ಲರಿಗಾಗಿ ಪ್ರತಿಯೊಬ್ಬನೂ ಹಂಬಲಿಸಿ ದುಡಿಯುವುದೇ ಇದರ ಪರಮೋದ್ದೇಶ. ಇದು ಶೀಲವಂತರ ಅರ್ಥಸಾಧಕ ಮಾರ್ಗ.

ಬಂಡವಾಳವನ್ನು ಬಂಡವಾಳಗಾರರ ಹಿಡಿತದಿಂದ ತಪ್ಪಿಸಿ ಅದನ್ನು ಮಾನವನ ಸೇವೆಗಾಗಿ ವಿನಿಯೋಗಿಸಿಕೊಳ್ಳುವುದು ಸಹಕಾರಮಾರ್ಗ. ಪ್ರಾಮಾಣಿಕತೆಯಿಂದ ಎಲ್ಲರ ಅಭ್ಯುದಯಕ್ಕಾಗಿ ಎಲ್ಲ ವ್ಯವಹಾರಗಳನ್ನೂ ನಡೆಸುವುದೇ ಅದರ ಆಡಳಿತ ನೀತಿ. ಈ ವ್ಯವಸ್ಥೆಯಲ್ಲಿ ಲೇವಾದೇವಿ, ವ್ಯಾಪಾರಸಾಪಾರ, ಕೃಷಿಕೈಗಾರಿಕೆ--ಎಲ್ಲವೂ ಸಮಾಜಸೇವಾದೃಷ್ಟಿಯಿಂದ ನಡೆಯುವುವು. ಹೀಗೆಂದರೆ ಅದು ಬಲಹೀನರಿಗೆ ಸಹಾಯಮಾಡುವ ಧರ್ಮಸಂಸ್ಥೆ ಎಂದು ಎಣಿಸಕೂಡದು. ಸಹಕಾರಿಗಳು ತಮ್ಮ ವ್ಯಕ್ತಿತ್ವವನ್ನು ಕಾಪಾಡಿಕೊಂಡು ಯಾರೊಬ್ಬರಿಗೂ ಅಧೀನ

ರಾಗಿರದೆ ಸ್ವಸಾಮರ್ಥ್ಯದಿಂದಲೇ ಜೀವನ ನಡೆಸುವರು. ಇತರ ರಿಂದ ಭಿಕ್ಷೆಯನ್ನು ಕೋರುವುದು ಅಪಮಾನಕರವೆಂದು ಅವರು ಭಾವಿಸಿರುವರು.

ಸಹಕಾರಸಂಸ್ಥೆಗಳ ಆಡಳಿತವನ್ನು ಆಯಾ ಸಂಸ್ಥೆಗಳ ಸದ ಸ್ಯರೇ ನಡೆಸುವರು. ಪ್ರಯೋಜನ ಪಡೆಯತಕ್ಕವರೂ ಸದ ಸ್ಯರೇ. ಧಣಿಗಳೂ ಅವರೇ; ದುಡಿಯುವವರೂ ಅವರೇ; ಸ್ವಾಮ್ಯವೂ ಅವರದೇ; ಸೇವೆಯೂ ಅವರದೇ. ಈ ಸಂಸ್ಥೆಗಳಿಗೆ ಸೇರುವುದೂ ಬಿಡುವುದೂ ಸದಸ್ಯರ ಇಚ್ಛೆಯಂತೆ; ಸೇರಲೇ ಬೇಕೆಂಬ ನಿರ್ಬಂಧವಿಲ್ಲ. ಒಂದುಸಲ ಸೇರಿದ ಮೇಲೆ ಸದಸ್ಯ ರೆಲ್ಲರೂ ಸಂಸ್ಥೆಯ ಹಿತದೃಷ್ಟಿಯಿಂದ ದುಡಿಯಬೇಕಾದುದು ಅವರ ಕರ್ತವ್ಯ; ಅವರ ಧರ್ಮ. ಸಹಕಾರಸಂಸ್ಥೆ ಎಂದರೆ ಅದೊಂದು ದೊಡ್ಡ ಸಂಸಾರ.

ಮಾನವನ ಘನೋದ್ದೇಶಗಳನ್ನು ಆರ್ಥಿಕಜೀವನದಲ್ಲಿ ಸಫಲಗೊಳಿಸಲು ಸಾಧಕವಾದುದೇ ಸಹಕಾರಮಾರ್ಗ. ಮನು ಷ್ಯನ ಬದುಕನ್ನೂ ಬಾಳನ್ನೂ ಉನ್ನತಿಗೆ ಒಯ್ಯಬೇಕೆಂಬುದು ಇದರ ಆಕಾಂಕ್ಷೆ. ಬಾಳನ್ನು ಉತ್ತಮಪಡಿಸದ ಬದುಕು ಇದ್ದರೂ ಇಲ್ಲದ ಹಾಗೆ. ಆದುದರಿಂದಲೇ ಈ ಪದ್ಧತಿ ಮಾನವನ ಧಾರ್ಮಿಕ ಮತ್ತು ಆರ್ಥಿಕಜೀವನವನ್ನು ವೃದ್ಧಿ ಗೊಳಿಸುವುದನ್ನೇ ಗುರಿಯಾಗಿ ಇಟ್ಟುಕೊಂಡು ಅವನ ಬದು ಕನ್ನು ವ್ಯವಸ್ಥೆಗೊಳಿಸುವುದು.

ಸಹಕಾರಪದ್ಧತಿಯ ತತ್ವಗಳು ಬಹು ಸೂಕ್ಷ್ಮವಾದುವು. ಈ ಪದ್ಧತಿಯನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೆ ಅವನ್ನು ಬಹಳ ಎಚ್ಚರಿಕೆಯಿಂದ ಪರಿಶೀಲಿಸಬೇಕು. ಕೆಲವರು ಸಹಕಾರ ವನ್ನು ರೂಪಮರೆಯಿಸಿಕೊಂಡಿರುವ ಸಮಾಜಸಮತಾವಾದ

ವೆಂದೂ ಮತ್ತೆ ಕೆಲವರು ಅದನ್ನು ಬಂಡವಾಳಗಾರರ ಪ್ರಭುತ್ವ ಮಾರ್ಗದ ರೂಪಾಂತರವೆಂದೂ ಹೇಳುವರು. ಆದರೆ ಸಹಕಾರ ಪದ್ಧತಿಯು ಇವೆರಡೂ ಅಲ್ಲ. ಅದು ಸ್ವಾವಲಂಬನೆ ಮತ್ತು ಸಾಮಾಜಿಕ ಶೀಲ ಇವೆರಡರ ಬಲದಮೇಲೆ ನಿಂತಿರುವ ಅರ್ಥ ಸಾಧನೆಯ ಮಾರ್ಗ. ಸಹಕಾರವು ಅತಿ ಕಷ್ಟವಾದ ಮತ್ತು ಅತಿ ಸುಂದರವಾದ ಕಲೆ.

ಈ ಮೂಲತತ್ವಗಳ ಆಧಾರದ ಮೇಲೆ ಸ್ಥಾಪನೆಯಾಗಿರುವ ಸಹಕಾರಸಂಸ್ಥೆಗಳು ಈಗ ಸುಮಾರು ನೂರುವರ್ಷಗಳಿಂದಲೂ ಪ್ರಪಂಚದ ಪ್ರಮುಖದೇಶಗಳಲ್ಲೆಲ್ಲಾ ಕೃಷಿ, ಪಶುಪಾಲನೆ, ಕೈಗಾರಿಕೆ, ವ್ಯಾಪಾರ, ವಿದ್ಯಾಭ್ಯಾಸ, ಆರೋಗ್ಯಸಾಧನೆ ಮತ್ತು ಇತರ ವಿಧದ ಸಮಾಜೋದ್ಧಾರಕ ಕೆಲಸಗಳನ್ನು ಕೈಕೊಂಡು ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಿವೆ. ಭರತ ಖಂಡದ ಎಲ್ಲಾ ಪ್ರಾಂತ್ಯಗಳಲ್ಲೂ ಸಂಸ್ಥಾನಗಳಲ್ಲೂ ಸಹಕಾರ ಸಂಸ್ಥೆಗಳು ಹುಟ್ಟಿ ಹರಡುತ್ತಿವೆ.

---

# ೨. ಹುಟ್ಟು ಮತ್ತು ಬೆಳವಣಿಗೆ

## ಇಂಗ್ಲೆಂಡಿನಲ್ಲಿ

ಸಹಕಾರ ಪದ್ಧತಿಗೆ ಇಂಗ್ಲೆಂಡೇ ತೌರುಮನೆ. ಆ ದೇಶ ದಲ್ಲಿ ಹದಿನೆಂಟನೆಯ ಶತಮಾನದ ಉತ್ತರಾರ್ಧದಿಂದೀಚೆಗೆ ಉಂಟಾದ ಆರ್ಥಿಕ ಕ್ರಾಂತಿಯು ಪರಿಣಾಮವಾಗಿ, ಆರ್ಥಿಕ

ಜೀವನದಲ್ಲಿ ಮಾತ್ರವಲ್ಲದೆ ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲೂ ಅನೇಕ ಪರಿವರ್ತನೆಗಳುಂಟಾದುವು. ಅರ್ಥೋತ್ಪತ್ತಿಯ ರಚನಾಕ್ರಮದಲ್ಲಿ ಮುಖ್ಯಬದಲಾವಣೆಎಂದರೆ ಯಂತ್ರಗಳ ಸ್ಥಾಪನೆ. ಈ ಕ್ರಾಂತಿಗೆ ಮುಂಚೆ ಕೆಲಸಗಾರರು ಎಲ್ಲಾ ಸಾಮಾನುಗಳನ್ನೂ ಕೈಯಿಂದಲೇ ತಮ್ಮ ಮನೆಗಳಲ್ಲಿ ಮಾಡುತ್ತಿದ್ದರು. ಬೇಕಾದ ಉಪಕರಣಗಳನ್ನು ಸಾಮಾನ್ಯವಾಗಿ ಕೆಲಸಗಾರನೇ ಮಾಡಿಕೊಳ್ಳುತ್ತಿದ್ದನು. ಹಾಗೆ ತಾನೇ ಮಾಡಿಕೊಳ್ಳಲಾಗದ ಉಪಕರಣಗಳನ್ನು ಕೊಳ್ಳಲು ಹೆಚ್ಚು ಬಂಡವಾಳ ಬೇಕಾಗಿರಲಿಲ್ಲ. ದೊಡ್ಡ ದೊಡ್ಡ ಯಂತ್ರಗಳೂ ಅವುಗಳನ್ನು ನಡೆಸಲುಬೇಕಾದ ಹಬೆ, ವಿದ್ಯುತ್ ಮುಂತಾದ ಶಕ್ತಿಗಳ ಅನುಕೂಲ ಇರಲಿಲ್ಲ. ವ್ಯವಸಾಯವೇ ಮುಖ್ಯ ಕಸಬಾಗಿತ್ತು. ನೂಲುವುದು ನೇಯುವುದು ಸಾಮಾನ್ಯ ಉಪಕಸಬುಗಳಾಗಿದ್ದವು. ಜನರೆಲ್ಲರೂ ತೃಪ್ತರಾಗಿ ಗ್ರಾಮಜೀವನದ ಆನಂದವನ್ನು ಅನುಭವಿಸುತ್ತಿದ್ದರು.

ಇಂಥಾ ನೆಮ್ಮದಿಯ ಜೀವನವು ಅನೇಕ ವಿಧದ ಯಂತ್ರಗಳ ನಿರ್ಮಾಣದ ಫಲವಾಗಿ ರೂಪಾಂತರ ಹೊಂದಿತು. ಗಿರಣಿಗಳು ಸ್ಥಾಪಿತವಾಗಿ ಹಬೆಯ ಶಕ್ತಿಯಿಂದ ಯಂತ್ರಗಳನ್ನು ಓಡಿಸುವುದು ಆಚರಣೆಗೆ ಬಂದಿತು. ದೇಹ ಬಲದ ಆವಶ್ಯಕತೆ ಕಡಮೆಯಾಯಿತು. ಇದರಿಂದ ಅಬಲೆಯರೂ ಮತ್ತು ಮಕ್ಕಳೂ ಗಿರಣಿಗಳಲ್ಲಿ ಕೆಲಸಮಾಡಲು ಅವಕಾಶವಾಯಿತು. ಬಂಡವಾಳಗಾರನ ಶಕ್ತಿ ಹೆಚ್ಚಾಯಿತು. ಬಂಡವಾಳಗಾರರಿಗೆ ಧನಪಿಶಾಚಿ ಹಿಡಿದು ಶ್ರಮಜೀವಿಗಳ ಕಷ್ಟಸುಖಗಳನ್ನು ಲೆಕ್ಕಿಸದೆ ಅವರನ್ನು ದುಡಿಸಲಾರಂಭಿಸಿದರು. ಪ್ರಾಯಸ್ಥರು ಗಿರಣಿಗಳಲ್ಲಿ ನಿತ್ಯವೂ ಹದಿನಾಲ್ಕು, ಹದಿನಾರು ಗಂಟೆಗಳ ಕಾಲ ದುಡಿಯುವುದು ವಾಡಿಕೆ

ಯಾಯಿತು. ಈ ತೆರವ ದುಡಿತಕ್ಕೆ ಒಳಗಾಗದೆ ಜೀವನ ನಡೆಸು ವುದು ಸಾಮಾನ್ಯಜನರಿಗೆ ಅಸಾಧ್ಯವಾಯಿತು. ಯಂತ್ರ ಸಹಾ ಯದಿಂದ ಸರಕುಗಳು ಹೇರಳವಾಗಿ ತಯಾರಾಗಿ ಅವುಗಳ ಬೆಲೆಯು ಬಹಳ ತಗ್ಗಿತು. ಇದರಿಂದ ಕ್ರಮೇಣ ಕೈಕೆಲಸದ ಸಾಮಾನುಗಳಿಗೆ ಗಿರಾಕಿ ಕಡಮೆಯಾಗಿ ಕೈಕೆಲಸದಿಂದ ಜೀವನ ಸಾಗಿಸುತ್ತಿದ್ದ ಅನೇಕರು ನಿರುದ್ಯೋಗಿಗಳಾದರು. ಗಿರಣಿಗಳ ಸ್ಥಿತಿಗತಿಗಳು ಕಠಿಣವಾಗಿದ್ದರೂ ಜೀವನೋಪಾಯಕ್ಕೆ ಬೇರೆಯ ಮಾರ್ಗವಿಲ್ಲದೆ, ಕೆಲಸಗಾರರು ಮೇಲಾಟದಿಂದ ಗಿರಣಿಗಳಿಗೆ ನುಗ್ಗಲು ಪ್ರಾರಂಭಿಸಿದರು. ಇದನ್ನು ನೋಡಿಕೊಂಡು ಮಾಲೀಕರು ತಮಗೆ ಬೇಕಾದಷ್ಟು ಮಂದಿ ಕೆಲಸಗಾರರು ಹೇಗಾ ದರೂ ಒದಗುವರೆಂಬ ಭರವಸೆಯಿಂದ ಕೂಲಿಯನ್ನು ಕಡಮೆ ಮಾಡಿದರು. ಆಗಿನಕಾಲದವರ ದೃಷ್ಟಿಯಲ್ಲಿ ಅದು ಸಹಜವೆಂದೇ ತೋರುತ್ತಿತ್ತು. ಆದರೂ ಗ್ರಾಮಾಂತರಗಳಿಂದ ಜನರು ಗಿರಣಿ ಗಳ ಕೂಲಿಕೆಲಸದ ಆಶೆಯಿಂದ ತಂಡತಂಡವಾಗಿ ಪಟ್ಟಣಗಳಿಗೆ ಬರಲಾರಂಭಿಸಿದರು. ಬಂಡವಾಳಗಾರರು ಹಣ ಸಂಪಾದನೆಯ ಆತುರದಲ್ಲಿ ಕೆಲಸಗಾರರ ಆರೋಗ್ಯಕ್ಷೇಮಲಾಭಗಳನ್ನು ಗಣನೆಗೆ ತೆಗೆದುಕೊಳ್ಳದೆ ಅವರನ್ನು ಗಾಳಿ ಬೆಳಕಿಲ್ಲದ ಕೊಳಕು ಕೋಣೆ ಗಳಲ್ಲಿ ಕೂಡಿ ಕೆಲಸಮಾಡಿಸುತ್ತಿದ್ದರು. ಈ ದುಃಸ್ಥಿತಿಯಲ್ಲಿಯೂ ಕೆಲಸಗಾರರು ತಮಗೆ ಕೆಲಸ ದೊರೆತುದೇ ಒಂದು ಪುಣ್ಯವಿಶೇಷ ವೆಂದುಭಾವಿಸಿ ಇಷ್ಟು ಕಷ್ಟಗಳಿದ್ದರೂ ಸಹಿಷ್ಣುತೆಯಿಂದ ದುಡಿ ಯುತ್ತಿದ್ದರು. ಈ ಹೀನಸ್ಥಿತಿಯು ಅವರನ್ನು ಬಾಧಿಸಿದರೂ ಯತ್ನವಿಲ್ಲದೆ ಸುಮ್ಮನಿರಬೇಕಾಗಿತ್ತು. ಈಗಿನ ಹಾಗೆ ಆ ಕಾಲ ದಲ್ಲಿ ಸರ್ಕಾರದವರು ಕೈಗಾರಿಕೆಯ ವ್ಯವಸ್ಥೆಯ ಯಾವ ವಿಚಾರ ದಲ್ಲೂ ಕೈಹಾಕುತ್ತಿರಲಿಲ್ಲ. ಹಾಗೆ ಕೈಹಾಕುವುದು ಬಂಡವಾಳ

ಗಾರರ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅಡಚಣೆ ಎಂದು ಆಗಿನ ಕಾಲದ ಜನರ ಅಭಿಪ್ರಾಯವಾಗಿತ್ತು. ಗಿರಣಿ ಮಾಲೀಕರ ನಿರಂಕುಶ ಪ್ರಭುತ್ವವನ್ನು ಮೊಟ್ಟುವುದಕ್ಕಾಗಲಿ ಕೆಲಸಗಾರರ ಹಕ್ಕು ಬಾಧ್ಯತೆಯ ರಕ್ಷಣೆಗಾಗಲಿ ಸರ್ಕಾರವು ಯಾವುದೊಂದು ಕಾನೂನನ್ನೂ ವಿಧಾಯಕ ಮಾಡಿರಲಿಲ್ಲ. ಇದರಿಂದ ಸರ್ಕಾರ ದವರು ಬಂಡವಾಳಗಾರರ ಪಕ್ಷವನ್ನು ವಹಿಸುತ್ತಿದ್ದರೆಂದು ತಿಳಿಯಕೂಡದು. ತಾಟಸ್ಥ್ಯ ಧೋರಣೆಯು ಆ ಕಾಲದ ಸಾಮಾಜಿಕ ಮತ್ತು ರಾಜಕೀಯ ನೀತಿಯಾಗಿತ್ತು. ಆದುದ ರಿಂದ ಬಂಡವಾಳಗಾರರು ಸ್ವಾರ್ಥದಿಂದ ಕೆಲಸಗಾರರನ್ನು ದುಡಿಸಿ ದ್ರವ್ಯಾರ್ಜನೆ ಮಾಡುತ್ತಿದ್ದರೂ ಕೂಡ ಸರ್ಕಾರದವರು ಅದನ್ನು ತಡೆಗಟ್ಟಲು ಏನನ್ನೂ ಮಾಡಲೆತ್ನಿಸಲಿಲ್ಲ.

ಕೆಲಸಗಾರರಾದರೋ ಒಗ್ಗಟ್ಟಿಲ್ಲದೆ, ತಿಳಿವಳಿಕೆ ಇಲ್ಲದೆ, ತಮ್ಮ ತಮ್ಮಲ್ಲೇ ಪೈಪೋಟಿ ನಡೆಸಿ ಬಂಡವಾಳಗಾರರ ಬಲೆಗೆ ಸಿಕ್ಕಿ ನರಳುತ್ತಿದ್ದರು. ಇವರಲ್ಲಿ ಪೈಪೋಟಿ ತಪ್ಪಿಸಿ ಪರಸ್ಪರ ಬೆಂಬಲ ಬೆಳಸಿ ಇವರನ್ನು ಈ ಕಷ್ಟದಿಂದ ಬಿಡಿಸಲು ಮಾಡಿದ ಎರಡು ಮೂರು ಪ್ರಯತ್ನಗಳು ಫಲಿಸಲಿಲ್ಲ. ಇದು ಕೆಲಸಗಾರರನ್ನು ಮತ್ತಷ್ಟು ನಿರುತ್ಸಾಹಿಗಳನ್ನಾಗಿ ಮಾಡಿತು. ಎಲ್ಲೆಲ್ಲೂ ನಿರಾ ಶೆಯ ಕಗ್ಗತ್ತಲೆ ಮೂಡಿ ಕೆಲಸಗಾರರಿಗೆ ದಿಕ್ಕೇ ತೋರದಂತಾ ಯಿತು. ಇಂಥ ದುರಂತ ಸ್ಥಿತಿಯಿಂದ ಕೂಲಿಗಾರರನ್ನು ಪಾರು ಮಾಡಲು ಶ್ರಮಿಸಿದವನು ರಾಬರ್ಟ ಓವನ್. ಕೂಲಿಗಾರರಿಗೆ ಸಹಕಾರ ಮಂತ್ರವನ್ನುಪದೇಶಿಸಿ ಅದು ಆಚರಣೆಗೆ ಬರುವಂತೆ ಯತ್ನಿಸಿದುದು ಈ ಮಹನೀಯನ ಕೆಲಸ.

ರಾಬರ್ಟ ಓವನ್ (೧೭೭೧-೧೮೫೮)ನ ತಾಯಿತಂದೆಗಳು ಬಡವರು. ಚಿಕ್ಕಂದಿನಿಂದಲೂ ಓವನ್ನನಿಗೆ ಓದಿನಲ್ಲಿ ಬಹಳ

ಆಸಕ್ತಿಯಿದ್ದರೂ ಸಂಸಾರವನ್ನು ನೀಗಲು ಇವನು ಓದುವು ದನ್ನು ಬಿಟ್ಟು ದುಡಿಯಬೇಕಾಗಲು, ತನ್ನ ಒಂಭತ್ತನೆಯ ವಯಸ್ಸಿನಲ್ಲೇ ಒಬ್ಬ ವರ್ತಕನ ಹತ್ತಿರ ಮಾಣಿಯ ಕೆಲಸಕ್ಕೆ ಸೇರಬೇಕಾಯಿತು. ಕ್ರಮೇಣ ಸ್ವಸಾಮರ್ಥ್ಯದಿಂದ ಬೇರೆ ಬೇರೆ ಊರುಗಳಲ್ಲಿ ಮೇಲ್ದರದ ನೌಕರಿ ಸಂಪಾದಿಸಿಕೊಂಡು ತನ್ನ ಹತ್ತೊಂಭತ್ತನೆಯ ವಯಸ್ಸಿನಲ್ಲಿ ಮ್ಯಾಂಚೆಸ್ಟರ್ ಪಟ್ಟಣದ ಒಂದು ಯಂತ್ರ ತಯಾರಿಸುವ ಉದ್ಯಮದಲ್ಲಿ ಪಾಲುಗಾರನಾಗಿ ಸೇರಿದನು. ಆತನು ತನ್ನ ದೂರದರ್ಶಿತ್ವ ಮತ್ತು ತೀಕ್ಷ್ಣ ಬುದ್ಧಿಯ ಬಲದಿಂದ ವ್ಯಾಪಾರದಲ್ಲಿ ಬಹಳ ಅಭಿವೃದ್ಧಿಹೊಂದಿ ೧೭೯೯ ರಲ್ಲಿ ಸ್ಕಾಟ್ಲೆಂಡಿನ ನ್ಯೂಲನಾರ್ಕ್ ಎಂಬ ಸ್ಥಳದಲ್ಲಿದ್ದ ಒಂದು ನೂಲಿನ ಗಿರಣಿಯಲ್ಲಿ ಪಾಲುಗಾರನಾದನು.

ನ್ಯೂಲನಾರ್ಕ್ ಒಂದು ಹಳ್ಳಿ. ಆ ಹಳ್ಳಿ ಸ್ಕಾಂಟ್ಲೆಂಡಿನ ಪ್ರಕೃತಿ ಸೌಂದರ್ಯದ ನೆಲೆವೀಡು. ಮನಸ್ಸಿಗೆ ಆಹ್ಲಾದವ ನ್ನುಂಟುಮಾಡುವ ರಮ್ಯಪ್ರದೇಶದಲ್ಲಿ ಗಿರಣಿಯು ಸ್ಥಾಪಿತವಾ ಗಿದ್ದರೂ ಆ ಗಿರಣಿಯ ಕೆಲಸಗಾರರ ಜೀವನಮಾತ್ರ ಇತರ ಪ್ರದೇಶಗಳ ಗಿರಣಿ ಕೆಲಸಗಾರರ ಜೀವನದಂತೆಯೇ ಕಷ್ಟಜೀವನ ವಾಗಿದ್ದುದೇ ವಿನಾ ಯಾವ ರೀತಿಯಲ್ಲಿಯೂ ಮೇಲಾಗಿರಲಿಲ್ಲ. ಎಲ್ಲರೂ ಬಡವರು; ಸಾಮಾನ್ಯವಾಗಿ ಎಲ್ಲರೂ ಅನಕ್ಷರಸ್ಥರು. ಇಂಥವರಲ್ಲಿ ಕುಡಕುತನ, ಜಗಳಗಂಟತನ, ಅಪ್ರಾಮಾಣಿಕತೆ, ದ್ರೋಹ, ವಂಚನೆ ಮೊದಲಾದ ದುರ್ಗುಣಗಳು ಹುಟ್ಟುವುದೇ ನಾಶ್ಚರ್ಯ? ಅವರ ಆರ್ಥಿಕ ಸ್ಥಿತಿಯಂತೂ ಹೇಳತೀರದು: ಮುಟ್ಟಿದರೆ ಬೀಳುವಂತಿದ್ದ ಮುರುಕು ಗುಡಿಸಲು; ತಿಂಗಳುಗ ಟ್ಟಳೆ ಸ್ನಾನವಿಲ್ಲದ ಮೈ, ಮೈಮೇಲೆ ಮಾಸಲುಚಿಂದಿ; ಶಿಸ್ತು, ಆದರಣೆ ಮತ್ತು ವಿದ್ಯಾಭ್ಯಾಸವಿಲ್ಲದೆ ಬೆಳೆಯುವ ಮಕ್ಕಳ

ಜೇನೆ. ಇವೆಲ್ಲಕ್ಕೂ ಮಿಗಿಲಾಗಿ ನಾಲಗಾರರ ಕಾಟ. ಎಂತಹವರಿಗಾದರೂ ಎದೆಗುಂದಿ ಪರಿತಪಿಸುವಂತೆ ಮಾಡುವಂತಹ ಪರಿಸ್ಥಿತಿ. ಇದೇ ರಾಬರ್ಟ ಓವನ್ನಿನ ಕಾರ್ಯಕ್ಷೇತ್ರ.

ಮಾನವನ ಬಾಳಿನ ಏರಿಳಿತಗಳಿಗೆ ಅವನಿರುವ ವಾತಾವರಣವು ಬಹುಮಟ್ಟಿಗೆ ಕಾರಣವೆಂಬುದು ಓವನ್ನಿನ ದೃಢ ನಂಬಿಕೆ. ಆ ವಾತಾವರಣವನ್ನು ಪರಿಷ್ಕರಿಸುವುದೇ ಸಾಮಾಜಿಕ ಪುನರ್ರಚನೆಯ ಮೊದಲನೆಯ ಹಂತ. ಆದುದರಿಂದ ಓವನ್ನನು ಮೊದಲು ಜನರಿಗೆ ಸ್ವಚ್ಛತೆಯ ಮಹಿಮೆಯನ್ನು ಬೋಧಿಸಿ, ಅವರ ಮೈ, ಬಟ್ಟೆ ಮತ್ತು ವಸತಿಗಳ ಕೊಳೆಯನ್ನು ನಿರ್ಮೂಲ ಮಾಡಿದನು. ಅನಂತರ ಅವರಿಗೆ ಮೋಸವಿಲ್ಲದೆ ಸುಲಭ ಬೆಲೆಗೆ ಆಹಾರಸಾಮಗ್ರಿಗಳು ದೊರೆಯುವಂತೆ ಒಂದು ಅಂಗಡಿಯನ್ನು ಏರ್ಪಡಿಸಿದನು. ಊಟ, ಬಟ್ಟೆ ಕೊಟ್ಟು ಅನಾಥರಾದ ಮಕ್ಕಳ ಪೋಷಣೆಗೆ ತಕ್ಕ ವ್ಯವಸ್ಥೆಮಾಡಿದನು. ಶಿಶುಗಳ ಯೋಗಕ್ಷೇಮವನ್ನು ಮರೆಯಲಿಲ್ಲ. ಅವುಗಳ ಬೆಳವಣಿಗೆಗೆ ಅನುಕೂಲವಾಗುವಂತೆ ಶಿಶುವಿಹಾರಗಳನ್ನೇರ್ಪಡಿಸಿದನು.*

ತನ್ನ ಗಿರಣಿಯಲ್ಲಿ ಕೆಲಸಮಾಡುವವರೆಲ್ಲರೂ ಒಂದೇ ಸಂಸಾರದವರೆಂದೇ ಓವನ್ನಿನ ಭಾವನೆ. ಒಗ್ಗಟ್ಟು ಮತ್ತು ಪರಸ್ಪರ ಸಹಾಯವೇ ತನ್ನ ಉದ್ಯಮಕ್ಕೆ ಅಡಿಗಲ್ಲೆಂದು ಭಾವಿಸಿ, ಅದಕ್ಕಾಗಿ ಹಗಲಿರುಳೂ ಶ್ರಮಿಸಿದನು. ಕೆಲಸಗಾರರಿಗೆಲ್ಲಾ ವಸತಿಗಳನ್ನೂ ನಾಟಕಶಾಲೆಗಳನ್ನೂ ಪುಸ್ತಕಭಂಡಾರ

---

* ಈ ಪುಸ್ತಕಮಾಲೆಯಲ್ಲಿ ೨೨ ನೆಯ ಕುಸುಮವಾಗಿ ಪ್ರಕಟಣೆಯಾಗಿರುವ ಶ್ರೀ ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್. ಅವರ "ಶಿಶುವಿಹಾರಗಳು" ಎಂಬ ಪುಸ್ತಕದಲ್ಲಿ ಹೆಚ್ಚು ವಿವರಗಳು ದೊರಕುವುವು.

ಗಳನ್ನೂ ಏರ್ಪಡಿಸಿದುದಲ್ಲದೆ, ಅವರಲ್ಲೇ ಪರಸ್ಪರ ಸಹಾಯ ಬುದ್ಧಿಯು ಬೇರೂರಲು ಅವರೇ ಹಣಕೂಡಿಸಿ ಅಂಗಡಿಗಳ ನ್ನೇರ್ಪಡಿಸುವಂತೆ ಮಾಡಿದನು. ಮಿತವ್ಯಯವನ್ನು ಬೋಧಿಸಿ ಕೆಲಸಗಾರರಿಗೆ ಹಣಕೂಡಿಸುವ ಮಾರ್ಗವನ್ನು ತೋರಿಸಿ ಕೊಟ್ಟನು. ನಾನಾರೀತಿಯಲ್ಲಿ ಧಣಿಯಾದ ಅವನಿಗೂ ಕೆಲಸಗಾರರಿಗೂ ಪರಸ್ಪರ ಸೌಹಾರ್ದವು ನೆಲಸಿ ಓವನ್ನಿನ ಗಿರಣಿಯಲ್ಲಿ ಕೆಲಸವು ಹುರುಪಿನಿಂದಲೂ ಉತ್ಸಾಹದಿಂದಲೂ ನಡೆಯತೊಡಗಿತು. ಇದರಿಂದ ಆ ಗಿರಣಿಗೆ ಸಂಬಂಧಪಟ್ಟ ಪ್ರತಿಯೊಬ್ಬನ ಸಂಪಾದನೆಯೂ ಹೆಚ್ಚಿ ಸಂಪದಭಿವೃದ್ಧಿ ಯಾಯಿತು. ಪರಸ್ಪರ ಉಪಕಾರ ನೀತಿಯನ್ನನುಸರಿಸಿ ಗಿರಣಿ ನಡೆಸಿದುದರ ಫಲವು ಕಣ್ಣೆದುರಿಗೆ ಬಂದು ನಿಂತಿತು.

ಓವನ್ನನು ಇಷ್ಟನ್ನು ಸಾಧಿಸಿದ ನಂತರ ತಾನೂ ಮತ್ತು ತನ್ನ ಗಿರಣಿಯ ಕೆಲಸಗಾರರು ಒಗ್ಗಟ್ಟು ಮತ್ತು ಸಹಕಾರಗಳ ಸಹಾಯದಿಂದ ಸಾಧಿಸಿದುದನ್ನು ಇತರ ಗಿರಣಿಗಳ ಮಾಲೀ ಕರಿಗೆ ತಿಳಿಸಿದನು; ಅವರೂ ಸಹಾ ಇದರಂತೆಯೇ ನಡೆಯು ವುದು ಉತ್ತಮವೆಂದು ಸಲಹೆ ಇತ್ತನು. ಆದರೆ ಅವರು ಯಾರೂ ಅವನ ಮಾತಿಗೆ ಕಿವಿಗೊಡದೆ ತಮ್ಮ ಹಳೆಯ ಮಾರ್ಗ ದಲ್ಲೇ ಮುಂದುವರಿದರು. ಓವನ್ನನು ಒಬ್ಬೊಂಟಿಗನಾಗಿದ್ದರೂ ಧೈರ್ಯಗೆಡಲಿಲ್ಲ. ತನ್ನ ಆಪ್ತಮಿತ್ರರ ಬೆಂಬಲಪಡೆದು ಕೆಲಸ ಗಾರರ ಹಿತಸಾಧನೆಗಾಗಿ ಸರ್ಕಾರದವರಿಂದ ಕಾನೂನು ಮಾಡಿ ಸಲು ಉದ್ಯುಕ್ತನಾದನು. ಕೆಲಸಗಾರರನ್ನು ಅವರಲ್ಲೇ ಪರಸ್ಪರ ಬೆಂಬಲದಿಂದ ತಮ್ಮ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಲು ತಕ್ಕ ಉದ್ಯಮಗಳನ್ನು ಕೈಗೊಳ್ಳುವಂತೆ ಪ್ರೇರಿಸಿದನು. ಆತನೂ ಮತ್ತು ಆತನ ಗೆಳೆಯರೂ ಕೆಲಸಗಾರರೊಡನೆ ಸೇರಿ

ಅನೇಕ ಸಾಮೂಹಿಕ ಉದ್ಯಮಗಳನ್ನು ಕೈಕೊಂಡು ನಡೆಸಿದರು.

ಓವನ್ನನು ಸಾಧಿಸಲು ಯತ್ನಿಸಿದುದು ಮೂರು ಕಾರ್ಯಗಳು. ಮೊದಲನೆಯದು, ಗಿರಣಿಯ ಕೆಲಸಗಾರರಿಗೆ ಅತ್ಯಾವಶ್ಯಕವಾದ ಜೀವನದ ಸೌಕರ್ಯಗಳನ್ನೇರ್ಪಡಿಸುವುದು. ಎರಡನೆಯದು, ಗಿರಣಿಯ ಕೆಲಸಗಾರರ ಹಿತದಲ್ಲಿ ಕಾನೂನುಮಾಡುವಂತೆ ಸರ್ಕಾರವನ್ನು ಎಚ್ಚರಗೊಳಿಸುವುದು. ಮೂರನೆಯದು, ಸ್ವಸಾಮರ್ಥ್ಯದಿಂದಲೇ ಕೆಲಸಗಾರರು ತಮ್ಮ ಬದುಕನ್ನೂ ಬಾಳನ್ನೂ ಉತ್ತಮಪಡಿಸಿಕೊಳ್ಳುವಂತೆ ಅವರ ಜೀವನವಿಧಾನ ವನ್ನು ಮಾರ್ಪಡಿಸುವುದು. ಈ ಮೂರು ಸಾಧನೆಗಳೂ ಈಗ ನಮ್ಮಲ್ಲಿ ಹಲವುಕಡೆ ಬಳಕೆಗೆ ಬಂದಿರುವುದರಿಂದ ಅವು ತೀರ ಸಾಮಾನ್ಯವಾಗಿ ನಮಗೆ ಕಾಣಬಹುದು. ಆದರೆ ಆಗಿನ ಕಾಲದಲ್ಲಿ ಸರ್ಕಾರಕ್ಕೂ ಮತ್ತು ಗಿರಣಿಮಾಲೀಕರಿಗೂ ಕೆಲಸ ಗಾರರ ವಿಷಯದಲ್ಲಿದ್ದ ತಿರಸ್ಕಾರಭಾವನೆಯನ್ನೂ, ಕೆಲಸಗಾರರ ನಿಸ್ಸಹಾಯ ನಿರುತ್ಸಾಹ ಸ್ಥಿತಿಯನ್ನೂ ನಮ್ಮ ಮನಸ್ಸಿನಲ್ಲಿ ಚಿತ್ರಿಸಿಕೊಂಡರೆ ಓವನ್ನಿನ ಪ್ರಯತ್ನಗಳ ಮಹತ್ವ ನಮಗೆ ಮನವರಿಕೆಯಾಗುವುದು.

ಓವನ್ನಿನ ಪ್ರಯತ್ನಗಳು ಆತನು ನಿರೀಕ್ಷಿಸಿದಷ್ಟು ಫಲಕಾರಿ ಯಾಗಲಿಲ್ಲ. ಆದರೂ ಅವನು ತನ್ನ ಶಕ್ತಿ ಉತ್ಸಾಹಗಳಿಂದ ತನ್ನ ಕಾರ್ಯಕ್ಷೇತ್ರವನ್ನು ಬಹು ಚೆನ್ನಾಗಿ ಹದಗೊಳಿಸಿದನು. ಅವನು ಬಿತ್ತಿದ ತತ್ವಗಳು ಉತ್ಕೃಷ್ಟವಾದುವು; ಆದುದರಿಂದ ಕಾಲಕ್ರಮದಲ್ಲಿ ಉತ್ತಮ ಫಲ ದೊರಕಿತು. ಆತನ ಜೀವಮಾನ ಕಾಲದಲ್ಲೇ ಕೆಲಸಗಾರರಿಗೆ ಅನುಕೂಲವಾದ ಕಾನೂನುಗಳು ಆಚರಣೆಗೆ ಬಂದುವು; ತನ್ನ ವೃದ್ಧಾಪ್ಯದಲ್ಲಿ ಸಹಕಾರ ಪದ್ಧ ತಿಯು ಬೆಳೆದು ಹರಡಿದುದನ್ನು ನೋಡಿಹಿಗ್ಗುವ ಸುಯೋಗವೂ

ಆವನದಾಯಿತು. ಧಣಿಗಳಿಗೂ ಕೆಲಸಗಾರರಿಗೂ ಇರುವ ಸೌಹಾರ್ದವೇ ಕೈಗಾರಿಕೆಗಳ ಏಳಿಗೆಯ ಅಡಿಗಲ್ಲೆಂಬ ಭಾವನೆಯು ಕಾಲಕ್ರಮದಲ್ಲಿ ಎಲ್ಲರಿಗೂ ಮನವರಿಕೆಯಾಯಿತು.

ಓವನ್ನನು ಹಾಕಿಕೊಟ್ಟ ಮೇಲ್ಪಂಕ್ತಿಗನುಸಾರವಾಗಿ ಸಹಕಾರ ಜೀವನವನ್ನು ಕಾರ್ಯರೂಪಕ್ಕೆ ತಂದವರು ಲ್ಯಾಂಕಾಷೈರಿಗೆ ಸೇರಿದ ರಾಕ್‌ಡೇಲ್ ಎಂಬ ಊರಿನ ಇಪ್ಪತ್ತೆಂಟು ನೇಯ್ಗೆಯವರು. ಇವರು ಕೇವಲ ಸಾಮಾನ್ಯ ದರ್ಜೆಯ ಜನರು. ಇವರು ಆ ಊರಿನ ಗಿರಣಿಯಲ್ಲಿ ಕೆಲಸಮಾಡಿ ಹೊಟ್ಟೆಹೊರೆದುಕೊಳ್ಳುತ್ತಿದ್ದರು. ಗಿರಣಿ ಮಾಲೀಕರು ಕೆಲಸಗಾರರ ಅನುಕೂಲಕ್ಕೆಂದು ಗಿರಣಿಯ ಆವರಣದಲ್ಲೇ ದಿನಸಿ ಮತ್ತು ಬಟ್ಟೆ ಚಿಲ್ಲರೆ ಅಂಗಡಿಯನ್ನಿಟ್ಟು ಕೆಲಸಗಾರರೆಲ್ಲರೂ ಅಲ್ಲೇ ಕೊಳ್ಳುವಂತೆ ಒತ್ತಾಯ ಪಡಿಸುತ್ತಿದ್ದರು. ಈರೀತಿಯಲ್ಲಿ ಲಾಭ ಪಡೆಯುವುದೊಂದೇ ಅಲ್ಲದೆ ಕೆಲಸಗಾರರನ್ನೂ ಹತೋಟಿಯಲ್ಲಿಡಲು ಪ್ರಯತ್ನಪಡುವುದೂ ಆ ಕಾಲದ ವಾಡಿಕೆಯಾಗಿತ್ತು. ಇದನ್ನು ಪ್ರತಿಭಟಿಸಲು ೧೮೪೩ರಲ್ಲಿ ಆ ಗಿರಣಿಯ ಕೆಲಸಗಾರರು ಒಂದು ಮುಷ್ಕರ ಹೂಡಿದರು. ಇದು ನಿಷ್ಫಲವಾಗಿ ಅವರ ಪಾಡು ಇನ್ನೂ ಕಷ್ಟಕ್ಕೀಡಾಯಿತು. ಆದರೂ ಧೈರ್ಯಗೆಡದೆ ಸಮಯ ದೊರೆತಾಗಲೆಲ್ಲ ಕೆಲಸಗಾರರು ಸಭೆಸೇರಿ ತಮ್ಮ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳಲು ವಿಧಾನಗಳನ್ನು ಚರ್ಚಿಸುತ್ತಿದ್ದರು. ರಾಕ್‌ಡೇಲ್ ಊರಿನಲ್ಲಿ ನಡೆಯುತ್ತಿದ್ದ ಇಂಥಾ ಸಭೆಗಳೊಂದರಲ್ಲಿ ಅದೇ ಊರಿನ ಚಾರಲ್ಸ್ ಹೋವರ್ತ್ ಎಂಬ ನೇಯ್ಗೆಯವನು ಸಹಕಾರಿ ಉಗ್ರಾಣವೊಂದನ್ನು ಸ್ಥಾಪಿಸುವ ಯೋಜನೆಯನ್ನು ಪ್ರಸ್ತಾಪಿಸಿದನು. ಆರಂಭದಲ್ಲಿ ಆತನ ಗೆಳೆಯರು ಆ ಯೋಜನೆಯ ವಿಷಯದಲ್ಲಿ

ಉತ್ಸಾಹ ತೋರಿಸಲಿಲ್ಲ. ಕೆಲವರು ಅದನ್ನು ಅಲ್ಲಗಳೆಯಲು ಕೂಡ ಹಿಂಜರಿಯಲಿಲ್ಲ. ಆದರೂ ಕೊನೆಗೆ ಹೋವರ್ತನ ಉತ್ಸಾಹಭರಿತವಾದ ವಾದಕ್ಕೆ ತಲೆಬಾಗಿ ಆತನು ಸೂಚಿಸಿದ ಉದ್ಯಮವನ್ನು ಕೈಕೊಂಡು ತಮ್ಮ ಬದುಕು ಮತ್ತು ಬಾಳನ್ನು ಉತ್ತಮಪಡಿಸಿಕೊಳ್ಳಲು ನಿಶ್ಚಯಿಸಿದರು. ಈ ಹೊಸ ಉದ್ಯಮಕ್ಕೆ ಆ ಊರಿನ ೨೮ ಜನ ನೆಯ್ಗೆಯವರು ಸೇರಲು ಒಪ್ಪಿದರು. ಇವರೇ ಸಹಕಾರದ ಇತಿಹಾಸದಲ್ಲಿ ಪ್ರಸಿದ್ಧರಾದ "ರಾಕ್‌ಡೇಲಿನ ಅಗ್ರಗಾಮಿಗಳು."

ಯಾವ ಉದ್ಯಮಕ್ಕೇ ಆಗಲಿ ಸ್ವಲ್ಪ ಶ್ರಮಪಟ್ಟರೆ ಒಪ್ಪಿಗೆ ದೊರೆಯುವುದು. ಆದರೆ ಅದನ್ನು ಕಾರ್ಯರೂಪಕ್ಕೆ ತರುವುದು ಬಹು ಕಷ್ಟ. ನಮ್ಮ ರಾಕ್‌ಡೇಲ್ ನೆಯ್ಗೆಯವರು ಬಂಡವಾಳವನ್ನೊದಗಿಸುವುದು ಹೇಗೆ? ಇದು ಅವರ ಮೊದಲನೆಯ ಸಮಸ್ಯೆಯಾಯಿತು. ಅವರಿಗೆ ಬರುತ್ತಿದ್ದ ಕೂಲಿ ಜೀವನಕ್ಕೆ ಸಾಲದಾಗಿದ್ದರೂ ಅವರು ದೃಢಸಂಕಲ್ಪರಾದುದರಿಂದ ಸಾಲಕ್ಕೆ ಹೋಗದೆ ತಾವು ಸಂಪಾದಿಸಿದ ಕೂಲಿಯ ಅಲ್ಪಸ್ವಲ್ಪವನ್ನು ಕೂಡಿಡುವ ಪ್ರಯತ್ನವನ್ನು ಹೂಡಿದರು ಪ್ರತಿಯೊಬ್ಬನೂ ವಾರವಾರವೂ ಮೂಲಬಂಡವಾಳಕ್ಕಾಗಿ ತನ್ನ ಕೂಲಿಯಿಂದ ಚಂದಾ ಕೊಡುತ್ತ ಬಂದನು. ಈ ರೀತಿ ಹಲವು ತಿಂಗಳ ಕಾಲ ತಮ್ಮ ಪ್ರತಿಜ್ಞೆಯನ್ನು ಸಾಧಿಸಿದನಂತರ ಒಬ್ಬೊಬ್ಬರು ಕೂಡಿಟ್ಟ ಹಣವು ಒಂದೊಂದು ಪೌಂಡು ಮೊತ್ತವಾಯಿತು. ಒಟ್ಟು ಬಂಡವಾಳ ೨೮ ಪೌಂಡುಗಳಾದುವು.

ಈ ಮಧ್ಯೆ ಆಗಾಗ ಸಭೆ ಸೇರಿ ತಮ್ಮ ಯೋಜನೆಗೆ ಸಂಬಂಧಪಟ್ಟ ಪ್ರತಿಯೊಂದು ವಿಷಯವನ್ನು ವಿಚಾರಮಾಡಿ ತಮ್ಮ ತೀರ್ಮಾನಗಳನ್ನು ಬರೆದಿಡುತ್ತಿದ್ದರು. ಅವರು ತೀರ್ಮಾನಿಸಿದ

ಉದ್ದೇಶಗಳಲ್ಲಿ ಇವು ಗಮನಾರ್ಹವಾದುವು—

೧. ಸಂಘದ ಸದಸ್ಯರ ಗೃಹಕೃತ್ಯಕ್ಕೆ ಬೇಕಾದ ಆಹಾರ ಸಾಮಗ್ರಿಗಳು ಮತ್ತು ಬಟ್ಟೆಬರೆ ಮುಂತಾದುವುಗಳನ್ನು ಒದಗಿಸುವ ಒಂದು ಸಹಕಾರಿ ಉಗ್ರಾಣವನ್ನು ಸ್ಥಾಪಿಸುವುದು.

೨. ಸಂಘದ ಸದಸ್ಯರ ವಾಸಕ್ಕೆ ಯೋಗ್ಯವಾದ ಮನೆಗಳನ್ನು ಕಟ್ಟುವುದು ಅಥವಾ ಕೊಳ್ಳುವುದು.

೩. ಸದಸ್ಯರಿಗೆ ಬೇಕಾದ ಸಾಮಾನುಗಳನ್ನು ಕ್ರಮೇಣ ತಾವೇ ತಯಾರಿಸುವುದು ಮತ್ತು ತನ್ಮೂಲಕ ಸದಸ್ಯರುಗಳಲ್ಲಿ ನಿರುದ್ಯೋಗಿಗಳಾಗಿರುವವರಿಗೆ ಕೆಲಸ ಒದಗಿಸುವುದು.

೪. ಸದಸ್ಯರಿಗೆ ಇನ್ನೂ ಹೆಚ್ಚು ಉದ್ಯೋಗವನ್ನು ಕಲ್ಪಿಸಿಕೊಡಲೂ ಮತ್ತು ಸಂಘಕ್ಕೆ ಅಗ್ಗವಾಗಿ ಒಳ್ಳೆಯ ದವಸಧಾನ್ಯಗಳು, ಕಾಯಿಪಲ್ಯಗಳು, ಹಣ್ಣುಹಂಪಲುಗಳು ಇವನ್ನು ದೊರಕಿಸಲೂ ಜಮೀನನ್ನು ಕ್ರಯಕ್ಕಾಗಲಿ ಗುತ್ತಿಗೆಗಾಗಲಿ ಪಡೆದು ವ್ಯವಸಾಯಕ್ಷೇತ್ರಗಳನ್ನೇರ್ಪಡಿಸುವುದು.

೫. ಸಾಧ್ಯವಾದಷ್ಟು ಜಾಗ್ರತೆಯಾಗಿ ಸಂಘವು ತನ್ನದೇ ಒಂದು ಸಾಮಾಜಿಕ ವ್ಯವಸ್ಥೆಯನ್ನು ಏರ್ಪಡಿಸಿಕೊಂಡು ಅದರ ಮೂಲಕ ಸದಸ್ಯರಿಗೆಲ್ಲಾ ಜೀವನಕ್ಕೆ ಸಾಕಾದಷ್ಟು ಉಪಪತ್ತಿ ದೊರೆಯುವಂತೆ ಮಾಡುವುದು. ಇದಕ್ಕೆ ಸಾಧನವಾಗುವಂತೆ ದೇಶದಲ್ಲಿ ವಿದ್ಯಾಭ್ಯಾಸಪದ್ಧತಿಯನ್ನೂ ಸರ್ಕಾರಕ್ರಮವನ್ನೂ ಬಲಪಡಿಸಲು ಪುನರ್ವ್ಯವಸ್ಥೆಗೊಳಿಸುವುದು. ಅಂದರೆ ತಮ್ಮದೇ ಒಂದು ಸುವ್ಯವಸ್ಥಿತವಾದ ವಸಾಹತನ್ನು (colony) ಸ್ಥಾಪಿಸುವುದು.

ಹೀಗೆ ಕೂಲಂಕಷವಾಗಿ ಯೋಚಿಸಿ ತಯಾರಿಸಿದ ತಮ್ಮ

ಯೋಜನೆಯನ್ನು ಸಾಕಾದಷ್ಟು ಬಂಡವಾಳ ಒದಗಿದ ಕೂಡಲೆ ಕಾರ್ಯರೂಪಕ್ಕೆ ತಂದರು. ರಾಕ್‌ಡೇಲಿನ ಟೋಡ್‌ಓಣಿಯಲ್ಲಿ ಒಂದು ಮಳಿಗೆಯನ್ನು ಗೊತ್ತುಮಾಡಿ ಅಲ್ಲಿ ಮೊಟ್ಟಮೊದಲು ಸಂಸಾರಕ್ಕೆ ಅತ್ಯಾವಶ್ಯಕವಾಗಿ ಬೇಕಾದ ನಾಲ್ಕು ಸಾಮಾನುಗಳನ್ನುಮಾತ್ರ ಮಾರಾಟಕ್ಕಿಟ್ಟು ೧೮೪೪ನೆಯ ಇಸವಿ ಡಿಸೆಂಬರ್ ೨೧ನೆಯ ತಾರೀಖು ಸಹಕಾರ ಉಗ್ರಾಣದ ಆರಂಭೋತ್ಸವವನ್ನು ನೆರವೇರಿಸಿದರು. ಉಗ್ರಾಣಕ್ಕೆ ಸಂಬಂಧಪಟ್ಟ ಕೆಲಸವನ್ನು ತಮ್ಮಲ್ಲೇ ಹಂಚಿಕೊಂಡರು. ನವೀನವಾದ ಈ ಉದ್ಯಮವನ್ನು ನೋಡಿದ ಜನರು ಸಹಕಾರ ಅಗ್ರಗಾಮಿಗಳನ್ನು ಹುಚ್ಚರೆಂದು ಹೀಯಾಳಿಸಲು ಕೂಡ ಹೇಸಲಿಲ್ಲ. ಮತ್ತೆ ಕೆಲವರು ಗೇಲಿ ಮಾಡುವ ಉದ್ದೇಶದಿಂದ ಉಗ್ರಾಣದಲ್ಲಿ ದೊರೆಯದ ಸಾಮಾನುಗಳು ಬೇಕೆಂದು ಕೇಳಿ ಇಲ್ಲವೆಂದು ಹೇಳಿದಾಗ ಪರಿಹಾಸ್ಯದ ಮಾತುಗಳನ್ನಾಡುತ್ತಿದ್ದರು. ಬರಿಯ ಬಡುಗಳನ್ನು ನೋಡಿ ನಕ್ಕವರಂತೂ ಎಷ್ಟೋಜನ. ಸರಿಯಾದ ಅನುಭವವಿಲ್ಲದ ಕಾರಣ, ಉತ್ಸಾಹಿಗಳಾದ ಸದಸ್ಯರುಗಳಿಗೂ ಬೇಸರ ಹುಟ್ಟಿಸುವಂಥ ಸನ್ನಿವೇಶಗಳು ಕೂಡ ಅನೇಕವೇಳೆ ಒದಗುತ್ತಿದ್ದುವು. ದೂರದಿಂದ ನಡೆದುಬಂದ ಸದಸ್ಯರು ತಮಗೆ ಬೇಕಾದ ಸಾಮಾನಿಲ್ಲದೆ ಬರಿಯಕೈಯಲ್ಲಿ ವಾಪಸ್ಸು ಹೋಗಬೇಕಾಗಿತ್ತು. ಅದನ್ನು ನೋಡಿ ಸಹಾನುಭೂತಿಯಿಲ್ಲದ ನೆರೆಹೊರೆಯವರೂ ಸಹೋದ್ಯೋಗಿಗಳೂ ಗೇಲಿಮಾಡುತ್ತಿದ್ದರು. ಇವೇ ಮೊದಲಾದ ಅನೇಕ ಎದೆಗುಂದಿಸುವ ಸನ್ನಿವೇಶಗಳಿದ್ದುವು. ಹೀಗಿದ್ದರೂ ನಮ್ಮ ೨೮ ನೆಯ್ಗೆಯವರೂ ಮತ್ತು ಅವರ ಕುಟುಂಬಕ್ಕೆ ಸೇರಿದವರೂ ಒಕ್ಕಟ್ಟಿನಿಂದಲೂ ದೃಢಸಂಕಲ್ಪದಿಂದಲೂ ಪ್ರಾಮಾಣಿಕತೆಯಿಂದಲೂ ತಮ್ಮ ಪ್ರತಿಜ್ಞಾಪಾಲನೆಗಾಗಿ ತಮಗೆ ಬೇಕಾದ

ಸಾಮಾನುಗಳನ್ನೆಲ್ಲಾ ತಮ್ಮದಾದ ಸಹಕಾರಿ ಉಗ್ರಾಣದಲ್ಲೇ ಕೊಳ್ಳುತ್ತಾಬಂದರು. ಕೊನೆಯಲ್ಲಿ ಸಂಕಲ್ಪ ಸಿದ್ಧಿಯಾಗುವು ದೆಂಬ ನಿಶ್ಚಲ ಭರವಸೆಯು ಅವರಲ್ಲಿ ಮೂಡಿತ್ತು. ಇದಲ್ಲವೆ ಪ್ರಗತಿಗಾಮಿಗಳ ಕಾರ್ಯತತ್ಪರತೆ!

ಈ ರೀತಿ ಪ್ರಾರಂಭಿಸಿದ ರಾಕ್‌ಡೇಲ್ ಸಂಘವು ದಿನೇ ದಿನೇ ಅಭಿವೃದ್ಧಿಗೆ ಬಂದು ಮೊದಲನೆಯ ವರ್ಷದ ಕೊನೆಯಲ್ಲಿ ೭೧೦ ಪೌಂಡುಗಳ ಸಾಮಾನು ಬಿಕರಿಯಾಗಿ ೨೨ ಪೌಂಡು ಗಳ ನಿವ್ವಳ ನಫೆ ತೇಲಿತು. ಇದರ ರಜತಮಹೋತ್ಸವದ ವರ್ಷದಲ್ಲಿ ಸದಸ್ಯರ ಸಂಖ್ಯೆ ೫,೮೦೦, ಆ ವರ್ಷದ ಒಟ್ಟು ವ್ಯಾಪಾರ ೨೩೬,೫೦೦ ಪೌಂಡುಗಳು, ನಿವ್ವಳ ನಫೆ ೨೮,೫೦೦ ಪೌಂಡುಗಳು. ಸಂಘದ ಎಂಭತ್ತನೆಯ ಹುಟ್ಟಿದ ಹಬ್ಬದ ವರ್ಷ ವ್ಯಾಪಾರ ಏಳುಲಕ್ಷ ಪೌಂಡುಗಳು. ಟೋಡ್ ಓಣಿಯ ಬಾಡಿಗೆ ಮಳಿಗೆಯಲ್ಲಿ ಪ್ರಾರಂಭವಾದ ಈ ಸಹಕಾರ ಉಗ್ರಾಣವು ಈಗ ತನ್ನದೇ ಆದ ದಿವ್ಯ ಭವನವನ್ನು ಪಡೆದಿದೆ. ೧೯೪೪ ನೆಯ ಇಸವಿಯಲ್ಲಿ ಈ ಸಂಘದ ಶತಮಾನೋತ್ಸವವು ನೆರವೇರಲಿರುವುದು.

ಇಂಗ್ಲೆಂಡಿನ ಸಹಕಾರ ಸಂಸ್ಥೆಗಳಲ್ಲಿ ಹೆಚ್ಚು ಪ್ರಶಸ್ತಿ ಪಡೆದು ಮುಂದುವರಿದಿರುವುವು ಈ ಸಹಕಾರಿ ಉಗ್ರಾಣಗಳೇ. ರಾಕ್‌ಡೇಲ್ ಅಗ್ರಗಾಮಿಗಳ ಪ್ರಯತ್ನವು ಸಫಲವಾಗಿ ಅವರ ಬಾಳು ಉತ್ತಮಗೊಂಡ ಸಮಾಚಾರವು ಎಲ್ಲೆಲ್ಲೂ ಹರಡಿ ಇತರ ಊರುಗಳಲ್ಲೂ ಈ ತರದ ಸಂಘಗಳು ಏರ್ಪಟ್ಟುವು. ಅವೂ ರಾಕ್‌ಡೇಲ್ ಸಂಘದ ಶಿಸ್ತು ಸಂಪ್ರದಾಯಗಳನ್ನೇ ಅನುಸರಿಸಿದುವು. ಸಹಕಾರ ಪ್ರಪಂಚದಲ್ಲಿ "ರಾಕ್‌ಡೇಲ್ ತತ್ವಗಳು" ಎಂದು ಪ್ರಸಿದ್ಧಿಗೆ ಬಂದಿರುವುವು ಯಾವುವೆಂದರೆ—

೧. ಯಾವಾಗಲೂ ನಗದು ವ್ಯಾಪಾರ ನಡೆಸುವುದು.

೨. ಸಾಮಾನುಗಳನ್ನು ಪೇಟೆ ಧಾರಣೆಗೆ ಮಾರುವುದು.

೩. ನಿವ್ವಳ ನಫೆಯಲ್ಲಿ ಸ್ವಲ್ಪ ಭಾಗವನ್ನು ಆಪದ್ಧನವಾಗಿಯೂ ಇನ್ನು ಸ್ವಲ್ಪಭಾಗವನ್ನು ಸಹಕಾರ ಪ್ರಚಾರಕ್ಕಾಗಿಯೂ ಇನ್ನೊಂದು ಭಾಗವನ್ನು ಸದಸ್ಯರ ಬಾಳನ್ನು ಉತ್ತಮಪಡಿಸುವ ವಿದ್ಯಾಭ್ಯಾಸ ಮುಂತಾದ ಕೆಲಸಗಳಿಗಾಗಿಯೂ ವಿರಿಸಲಾಗಿಡುವುದು.

೪. ಮೂಲಬಂಡವಾಳಗಾರರಿಗೆ ಕ್ಲುಪ್ತವಾದ ಬಡ್ಡಿಯನ್ನು ಹಂಚಿ ಉಳಿದ ನಫೆಯಲ್ಲಿ ಆಯಾ ಸದಸ್ಯರು ಮಾಡಿದ ವ್ಯಾಪಾರದ ಮೊಬಲಗಿನಮೇಲೆ ದಾಮಾಷಾ "ರಿಬೇಟ್" ಹಂಚುವುದು.

೫. ಸಂಘದ ಆಡಳಿತದಲ್ಲಿ ಎಲ್ಲರೂ ಭಾಗವಹಿಸಿ ಕೆಲಸ ಮಾಡಲು ಪೂರ್ಣ ಅವಕಾಶ ಕಲ್ಪಿಸುವುದು.

೬. ಮತ ಸಂಬಂಧವಾದ ವಿಷಯಗಳಲ್ಲಿ ತಾಟಸ್ಥ್ಯನೀತಿಯನ್ನು ಅನುಸರಿಸುವುದು.

ಈ ತತ್ವಗಳನ್ನನುಸರಿಸಿ ಕೆಲಸಮಾಡಿದ ಪ್ರತಿಯೊಂದು ಸಹಕಾರಿ ಉಗ್ರಾಣವೂ ಊರ್ಜಿತವಾಗಿದೆ.

ರಾಕ್‌ಡೇಲ್ ಅಗ್ರಗಾಮಿಗಳು ಸಾಧಿಸಲು ಪ್ರಯತ್ನಪಟ್ಟ ಉದ್ದೇಶಗಳು ಐದು. ಈ ಪೈಕಿ ಮೊದಲನೆಯ ನಾಲ್ಕು ಕಾಲಕ್ರಮದಲ್ಲಿ ಕೈಗೂಡಿದುವೆಂದು ಹೇಳಬಹುದು. ಐದನೆಯದಾದ ಸಮಾಜದ ಆರ್ಥಿಕ ಪುನರ್ವ್ಯವಸ್ಥೆಯ ಯೋಜನೆಯು ಕಾರ್ಯರೂಪಕ್ಕೆ ಬರಲಿಲ್ಲ. ಈ ಐದನೆಯ ಉದ್ದೇಶಸಾಧನೆ ಬಹು ಕಷ್ಟವಾದುದಾದರೂ ಅದನ್ನು ಅಗ್ರಗಾಮಿಗಳು ಮೊದಲಿನಿಂದಲೂ ತಮ್ಮ ಒಂದು ಧ್ಯೇಯವನ್ನಾಗಿಟ್ಟುಕೊಂಡಿದ್ದುದು

ಅವರ ಅಂತರಂಗ ಮನೋಭಾವನೆ ಯಾವರೀತಿ ಇದ್ದಿತೆಂಬುವನ್ನು ಸೂಚಿಸುತ್ತದೆ.

ಈಗ ಇಂಗ್ಲೆಂಡಿನಲ್ಲಿ ರಾಕ್‌ಡೇಲ್ ಅಗ್ರಗಾಮಿಗಳು ತೋರಿಸಿಕೊಟ್ಟ ದಾರಿಯನ್ನನುಸರಿಸಿ ಸುಮಾರು ೧೨೦೦ ಸಹಕಾರ ಉಗ್ರಾಣಗಳು ಕೆಲಸಮಾಡುತ್ತಿವೆ. ಸದಸ್ಯರ ಸಂಖ್ಯೆ ಎಪ್ಪತ್ತೆರಡು ಲಕ್ಷಕ್ಕೆ ಮೀರಿವೆ. ಉಗ್ರಾಣಗಳು ಸದಸ್ಯರುಗಳ ಸಂಸಾರಕ್ಕೆ ಬೇಕಾದ ಸಾಮಗ್ರಿಗಳೆಲ್ಲವನ್ನೂ ಒದಗಿಸುತ್ತಿರುವುವು. ಅನೇಕ ಸಾಮಾನುಗಳು ಸಹಕಾರಿಗಳೇ ನಡೆಸುತ್ತಿರುವ ಗಿರಣಿಗಳಲ್ಲಿ ತಯಾರಾಗುತ್ತಿವೆ.

ರಾಕ್‌ಡೇಲ್ ತತ್ವಗಳು ಬಹಳಕಾಲದವರೆಗೂ ಪಾಲನೆಯಾದವು. ಆದರೆ ಈಚೀಚೆಗೆ ನಗದು ವ್ಯಾಪಾರದ ತತ್ವವು ಸಡಲಿ ಸಾಲದ ವ್ಯಾಪಾರವು ಅಲ್ಲಲ್ಲಿ ತಲೆ ಎತ್ತುವ ಸೂಚನೆಗಳು ಕಾಣಬರುತ್ತಿವೆ. ಇದು ವಿನಾ ಇತರ ತತ್ವಗಳು ಆಚರಣೆಯಲ್ಲಿ ಈಗಲೂ ಯಾವ ಬದಲಾವಣೆಯೂ ಹೊಂದದೆ ನಡೆದು ಬರುತ್ತಿವೆ.

ಒಂದೊಂದು ಸಹಕಾರಿ ಉಗ್ರಾಣವೂ ತನಗೆ ಬೇಕಾದಷ್ಟು ಸಾಮಾನುಗಳನ್ನು ಚಿಲ್ಲರೆಯಾಗಿ ಪೇಟೆಯಲ್ಲಿ ಕೊಂಡುಕೊಂಡು ಬಂದು ಮಾರಾಟಕ್ಕಾಗಿ ಇಡುತ್ತಿದ್ದಿತು. ಇದರಲ್ಲಿ ಎರಡು ವಿಧವಾದ ಕೊರತೆಯಿದ್ದಿತು. ಸರಿಯಾದ ಸಾಮಾನನ್ನು ಸರಿಯಾದ ಬೆಲೆಗೆ ಕೊಳ್ಳುವ ಶಕ್ತಿ ಉಗ್ರಾಣಗಳ ವ್ಯವಸ್ಥಾಪಕರಿಗೂ ಇರಲಿಲ್ಲ. ಚಿಲ್ಲರೆಯಾಗಿ ಸಾಮಾನುಗಳನ್ನು ಕೊಳ್ಳುವುದರಿಂದ ಅವನ್ನು ಸುಲಭ ಧಾರಣೆಗೆ ಮಾರುವುದು ಕೆಲವು ಸಮಯಗಳಲ್ಲಿ ಸಾಧ್ಯವಾಗುತ್ತಿರಲಿಲ್ಲ. ಉಗ್ರಾಣಗಳೆಲ್ಲಾ ಒಟ್ಟುಕೂಡಿ, ಸಾಮಾನುಗಳನ್ನು ರಾಶಿವ್ಯಾಪಾರದಲ್ಲಿ ಕೊಂಡು

ಉಗ್ರಾಣಗಳಿಗೆ ಸರಬರಾಜು ಮಾಡುವ ಸಂಘವನ್ನು ಏರ್ಪಡಿಸಿದರೆ ಈ ತೊಂದರೆಗಳನ್ನು ನಿವಾರಣೆಮಾಡಬಹುದೆಂಬ ಸೂಚನೆ ಬಂತು. ೧೮೬೪ರಲ್ಲಿ ರಾಶಿ ವ್ಯಾಪಾರದ ಅನುಕೂಲಕ್ಕೆ ಇಂಗ್ಲೆಂಡು ದೇಶಕ್ಕೆಲ್ಲಾ ಅನ್ವಯಿಸುವಂತೆ ಒಂದು "ಹೋಲ್‌ಸೇಲ್" ಅಥವ ಠೋಕು ಸಂಘವು ಸ್ಥಾಪಿತವಾಯಿತು. ಈ ಠೋಕು ಸಂಘದ ಸದಸ್ಯರು ಸಹಕಾರಿ ಉಗ್ರಾಣಗಳು ; ಇದರ ನಡವಳಿಕೆಯೂ ರಾಕ್‌ಡೇಲ್ ತತ್ವಗಳ ಆಧಾರದ ಮೇಲೆ ಏರ್ಪಾಡಾಯಿತು. ಒಂಟೊಂಟಿಯಾಗಿ ಕೆಲಸಮಾಡುತ್ತಿದ್ದ ಸಹಕಾರಿ ಉಗ್ರಾಣಗಳೆಲ್ಲವೂ ಇದರ ಪ್ರಯೋಜನವನ್ನರಿತು ಸದಸ್ಯರಾಗಿ ಸೇರಿ ಠೋಕು ಸಂಘವನ್ನು ಮತ್ತಷ್ಟು ಬಲಪಡಿಸಿದುವು. ೧೮೬೮ರಲ್ಲಿ ಸ್ಕಾಟ್ಲೆಂಡಿಗೆ ಅನ್ವಯಿಸುವಂತೆ ಮತ್ತೊಂದು ಠೋಕು ಸಂಘ ಸ್ಥಾಪಿತವಾಯಿತು. ಇವೆರಡು ಠೋಕುಗಳು ಸದಸ್ಯ ಸಹಕಾರಿ ಉಗ್ರಾಣಗಳಿಗೆ ಬೇಕಾದ ಸಾಮಾನುಗಳನ್ನೆಲ್ಲಾ ರೈತನಿಂದಲೇ ಅಥವಾ ಕಾರ್ಖಾನೆಯಿಂದಲೇ ನೇರವಾಗಿ ಒಟ್ಟೊಟ್ಟಿಗೆ ಕೊಂಡು ಸನಗನ್ನು ಉಗ್ರಾಣಗಳಿಗೆ ಒದಗಿಸುವ ಏರ್ಪಾಟಾಯಿತು. ಇದರಿಂದ ಮಧ್ಯಸ್ಥಿಕೆಯ ವರ್ತಕರಾದ ದಳ್ಳಾಳಿಗಳಿಗೆ ಅನಾವಶ್ಯಕವಾಗಿ ಕೊಡುತ್ತಿದ್ದ ಲಾಭವೆಲ್ಲವೂ ಉಳಿತಾಯವಾಗಿ ಸಾಮಾನುಗಳು ಅತಿ ಸುಲಭ ಬೆಲೆಗೆ ದೊರಕುವಂತಾಯಿತು. ಈ ವ್ಯವಸ್ಥೆಯಿಂದ ರೈತರಿಗೂ ಕಾರ್ಖಾನೆಯುವರಿಗೂ ಕೂಡ ಅನುಕೂಲವಾಯಿತು. ಕ್ಲುಪ್ತವಾದ ಗಿರಾಕಿ ದೊರೆತುದರಿಂದ ಗಿರಾಕಿಗಳ ಇಷ್ಟಾನುಸಾರ ಸಾಮಾನುಗಳನ್ನೊದಗಿಸಲು ಅವಕಾಶ ದೊರಕಿತು. ಹಿಂದೆ ಗಿರಾಕಿ ಸಂಪಾದಿಸಲು ಮಾಡಬೇಕಾಗಿದ್ದ ಅನೇಕ ಖರ್ಚು ಬಾಬುಗಳು ಉಳಿತಾಯವಾಗಿ ಅವರ ನಿವ್ವಳ ನಫೆಯು ಏರಿತು.

ಸಾಮಾನುಗಳನ್ನು ಉತ್ಪತ್ತಿಮಾಡುವವರಿಗೂ ಉಪಯೋಗಿಸುವವರಿಗೂ ಈ ರೀತಿ ನೇರವಾದ ಸಂಬಂಧವನ್ನುಂಟುಮಾಡಿ ಪರಸ್ಪರ ಅನುಕೂಲಗಳನ್ನೊದಗಿಸುವುದು ಸಹಕಾರದ ಮುಖ್ಯೋದ್ದೇಶಗಳಲ್ಲೊಂದು.

ಕಾಲಕ್ರಮದಲ್ಲಿ ಈ ಠೋಕುಗಳೆರಡೂ ಬಂಡವಾಳ ಸಂಸ್ಥೆಗಳಿಂದ ಸಾಮಾನುಗಳನ್ನು ಕೊಳ್ಳುವುದನ್ನು ನಿಲ್ಲಿಸಿ ಸಹಕಾರ ತತ್ವದ ಆಧಾರದ ಮೇಲೆ ವ್ಯವಸಾಯ ಕ್ಷೇತ್ರವನ್ನೂ ಮತ್ತು ಗಿರಣಿ ಕಾರ್ಖಾನೆಗಳನ್ನೂ ಏರ್ಪಡಿಸಿ ಅವುಗಳಿಂದ ಸಾಮಾನುಗಳನ್ನು ಒದಗಿಸಲು ಮೊದಲುಮಾಡಿದುವು. ಮಾರಾಟವಾದ ಒಟ್ಟು ಸಾಮಾನುಗಳಲ್ಲಿ ಸುಮಾರು ಮೂರನೆಯ ಒಂದು ಭಾಗದಷ್ಟು ಈ ರೀತಿ ಸಹಕಾರ ಸಂಸ್ಥೆಗಳಲ್ಲಿ ತಯಾರಾದುವು. ಬಟ್ಟೆ, ಹೆಣಿಗೆ ಸಾಮಾನುಗಳು, ಸಾಬೂನು, ಮೇಣದಬತ್ತಿ, ಜೋಡು, ಟೋಪಿ, ಬಿಸ್ಕತ್ತು, ಚಾಕೊಲೇಟ್, ಟೀ, ಕಾಫಿ, ಕೋಕೊ, ಹಣ್ಣಿನ ರಸಾಯನ, ಮುರಬ್ಬಾ - ಈ ವಿವಿಧ ಸಾಮಾನುಗಳನ್ನು ಠೋಕುಗಳೇ ತಯಾರಿಸಿ ಒದಗಿಸುತ್ತಿವೆ. ಇವುಗಳ ಸಹಾಯಾಂಗಗಳಾಗಿ ಸ್ವಂತ ಬ್ಯಾಂಕು, ವಿಮಾ ಮತ್ತು ಯಾನ ವಾಹನಸೌಕರ್ಯಗಳನ್ನೊದಗಿಸುವ ಶಾಖೆಗಳು ಏರ್ಪಟ್ಟಿವೆ. ಹೊರದೇಶಗಳಲ್ಲಿ ಸ್ವಂತ ಮಳಿಗೆಗಳಿವೆ; ಆಹಾರಪದಾರ್ಥಗಳನ್ನೊದಗಿಸಲು ಸ್ವದೇಶದಲ್ಲೂ ಪರದೇಶಗಳಲ್ಲೂ ಸ್ವಂತ ತೋಟಗಳಿವೆ.

ರಾಕ್‌ಡೇಲ್ ಅಗ್ರಗಾಮಿಗಳು ಮೊದಲಿನಿಂದಲೂ ವಿದ್ಯಾಭ್ಯಾಸ ಮತ್ತು ಸಹಕಾರ ತತ್ವಪ್ರಚಾರಗಳಿಗೆ ಹೆಚ್ಚುಗಮನ ಕೊಟ್ಟರು. ಸಹಕಾರದ ಮೂಲತತ್ವಗಳು ಮನವಟ್ಟಾಗಬೇಕಾದರೆ ವಿದ್ಯಾಪ್ರಚಾರವು ಅತ್ಯಾವಶ್ಯಕ. ಅಲ್ಲದೆ ಬಂಡವಾಳ

ಪ್ರಭುತ್ವ, ಸಮಾಜಸಮತಾವಾದ ಚಳವಳಿ ಇವುಗಳ ಮಧ್ಯೆ ಸಿಕ್ಕಿ ಸಹಕಾರಧ್ಯೇಯಗಳು ಮಲಿನವಾಗುವ ಸಂಭವವುಂಟು. ಆದುದರಿಂದಲೇ ಸಹಕಾರಸಂಘಗಳ ಲಾಭದಲ್ಲಿ ಕೊಂಚ ಭಾಗವನ್ನು ಸಹಕಾರಪ್ರಚಾರಕ್ಕಾಗಿ ಮೀಸಲಾಗಿಡುವ ಪದ್ಧತಿಯು ಇಂಗ್ಲೆಂಡಿನಲ್ಲಿ ಮೊದಲಿಂದಲೂ ವಾಡಿಕೆಗೆ ಬಂದಿದೆ. ೧೮೬೯ರಲ್ಲಿ ಸಹಕಾರಪ್ರಚಾರಕ್ಕಾಗಿಯೇ ಒಂದು ಸಂಘವು ಸ್ಥಾಪನೆಯಾಯಿತು. ಅದು ದಿನೇ ದಿನೇ ಅಭಿವೃದ್ಧಿಗೆ ಬರುತ್ತಿದೆ. ಈ ಪ್ರಚಾರಸಂಸ್ಥೆಗೆ ಸಹಕಾರಸಂಘಗಳು ತಮ್ಮ ತಮ್ಮ ವರಮಾನಕ್ಕೆ ತಕ್ಕಂತೆ ಚಂದಾ ಸಲ್ಲಿಸುವುವು. ಹೀಗೆ ವರ್ಷ ವರ್ಷವೂ ವಸೂಲಾಗುವ ಸುಮಾರು ಐವತ್ತುಸಾವಿರ ಪೌಂಡುಗಳಷ್ಟು ಚಂದಾಹಣವೇ ಇಂಗ್ಲೆಂಡಿನ ಸಹಕಾರಪ್ರಚಾರ ಸಂಸ್ಥೆಯು ಕೈಕೊಂಡಿರುವ ನಾನಾವಿಧದ ಪ್ರಚಾರಕಾರ್ಯಕ್ರಮಕ್ಕೆ ಮೂಲಾಧಾರ.

ಕೈಗಾರಿಕೆಯೇ ಮುಖ್ಯ ಕಸಬಾಗಿರುವ ಇಂಗ್ಲೆಂಡಿನಲ್ಲಿ ಗಿರಣಿಕೆಲಸಗಾರರಿಗೆ ಕ್ಲುಪ್ತಬಟವಾಡೆ ಸಲ್ಲುವುದು. ಅವರುಗಳು ಸಂಸಾರಕ್ಕೆ ಬೇಕಾದ ಸಾಮಗ್ರಿಗಳನ್ನೊದಗಿಸಿಕೊಳ್ಳಲು ತಮ್ಮ ವರಮಾನವನ್ನು ಎಷ್ಟು ವಿತರಣೆಯಿಂದ ಖರ್ಚುಮಾಡಿದರೆ ಅಷ್ಟು ಸೌಖ್ಯ ದೊರೆಯುವುದೆಂಬುದನ್ನರಿತು ಕೆಲಸಗಾರರ ಕುಟುಂಬವರ್ಗದವರೆಲ್ಲರೂ ಸಹಕಾರಿ ಉಗ್ರಾಣಗಳಲ್ಲೇ ಎಲ್ಲಾ ವ್ಯವಹಾರಗಳನ್ನೂ ನಡೆಸುವರು. ನಿಷ್ಕರ್ಷೆಯಾದ ಬೆಲೆ, ಕರಾರುವಾಕು ತೂಕ ಮತ್ತು ಅಳತೆ; ಒಬ್ಬರಿಗೆ ಒಂದು ಇನ್ನೊಬ್ಬರಿಗೆ ಬೇರೊಂದು ಹೀಗೆ ಸಾಮಾನುಗಳನ್ನು ಕೊಡುವುದರಲ್ಲಿ ತಾರತಮ್ಯ ಪಕ್ಷಪಾತಗಳಿಲ್ಲ; ವ್ಯಾಪಾರದಲ್ಲಿ ಗುಟ್ಟುಗುಮಾನಿಗಳಿಗೆ ಅವಕಾಶವಿಲ್ಲ; ಸಂಸ್ಥೆಯ ಸ್ವಾಮಿತ್ವ ಸದಸ್ಯರದೇ

ಎಂಬ ಭಾವನೆ–ಇವೇ ಮೊದಲಾದ ಅನುಕೂಲಭಾವನೆಗಳು ಸದಸ್ಯರುಗಳನ್ನು ಸಹಕಾರನಿಷ್ಠರನ್ನಾಗಿ ಮಾಡಿವೆ. ಚಿಕ್ಕ ಹುಡುಗರುಗಳು ತಮ್ಮ ತಂದೆತಾಯಿಗಳ ಪರವಾಗಿ ಸಲೀಸಾಗಿ ವ್ಯಾಪಾರ ನಡೆಸುವುದು ಈ ತರಹ ಸಂಸ್ಥೆಗಳಲ್ಲಿ ಕಾಣುವ ಸಾಧಾರಣದೃಶ್ಯ. ಅಲ್ಲದೆ ಸದಸ್ಯರುಗಳು ಮಾಡುವ ವ್ಯಾಪಾರದ ಮೊತ್ತದಮೇಲೆ ಸಹಕಾರ ಉಗ್ರಾಣಗಳು ಪ್ರತಿವರ್ಷವೂ "ರಿಬೇಟ್" (ಅದನ್ನು ಇಂಗ್ಲೆಂಡಿನಲ್ಲಿ "ಡಿವಿಡೆಂಡ್" ಅಥವ "ಡಿವಿ" ಎಂದು ಕರೆಯುತ್ತಾರೆ) ಹಂಚುವರು. ಈ ಲಾಭಾಂಶವು ಸದಸ್ಯನ ಗೃಹಿಣಿಗೆ ಸಲ್ಲಬೇಕಾದದ್ದೆಂದು ಆ ದೇಶದಲ್ಲಿ ಸಾಮಾನ್ಯವಾಗಿ ಅಂಗೀಕೃತವಾಗಿದೆ; ಇದು ಯಜಮಾನನ ತನಿಖೆಗೆ ಒಳಪಟ್ಟ ವರಮಾನವಲ್ಲವೆಂದು ಗಣಿಸುವುದು ವಾಡಿಕೆಯಾಗಿದೆ. ಆದುದರಿಂದ ರಿಬೇಟನ್ನು ಹೆಚ್ಚಿಸಿಕೊಳ್ಳಲು ಸಹಕಾರಿ ಉಗ್ರಾಣಗಳ ವಿಷಯದಲ್ಲಿ ಗೃಹಿಣಿಯರು ಹೆಚ್ಚು ಆಸಕ್ತಿ ಉತ್ಸಾಹಗಳನ್ನು ತೋರಿಸುವುದು ಸ್ವಾಭಾವಿಕವಾಗಿದೆ.

ಈ ಉಗ್ರಾಣಸಂಘಗಳು ಸದಸ್ಯರುಗಳಲ್ಲಿ ಮಿತವ್ಯಯ ಅಭ್ಯಾಸವನ್ನು ಹರಡುವುದಕ್ಕೂ ಸ್ವಸಾಮರ್ಥ್ಯದಿಂದ ಜೀವನವನ್ನು ಮೇಲುಗೊಳಿಸಿಕೊಳ್ಳುವುದಕ್ಕೂ ಸಹಾಯಮಾಡಿವೆ. ಸಹಕಾರ ಸಂಘಗಳು ತಮ್ಮ ಉಪಪತ್ತಿಗನುಗುಣವಾಗಿ ಒಂಟೊಂಟಿಯಾಗಿ ಆಗಲಿ ಅಥವ ಇತರ ಸಂಘಗಳ ಜೊತೆಗೂಡಿಯಾಗಲಿ ತಮ್ಮ ಸದಸ್ಯರುಗಳಿಗೆ ನಾನಾವಿಧದ ಸೌಕರ್ಯಗಳನ್ನೊದಗಿಸಿವೆ. ಮಕ್ಕಳ ವಿದ್ಯಾಭ್ಯಾಸ, ವೈದ್ಯಸಹಾಯ, ವಿದೇಶಸಂಚಾರ, ವಿಹಾರ, ವಿಶ್ರಾಂತಿ—ಇವೇ ಮೊದಲಾದ ಅನುಕೂಲಗಳನ್ನು ಒದಗಿಸುತ್ತಿವೆ. ಈ ಅನುಕೂಲಗಳ ಜೊತೆಗೆ ಈ ಸಂಘಗಳ

ನಿರ್ವಾಹಕಾರ್ಯದಲ್ಲಿ ತೊಡಗಿರುವ ಸದಸ್ಯರಿಗೆ ವ್ಯಾಪಾರೋದ್ಯಮಗಳಲ್ಲೂ ಸಂಸ್ಥೆಗಳ ಕಾರ್ಯನಿರ್ವಾಹದಲ್ಲೂ ಪ್ರಜಾಪ್ರಭುತ್ವ ವಿಧಾನಗಳಲ್ಲೂ ಅತ್ಯುತ್ತಮವಾದ ಶಿಕ್ಷಣ ದೊರೆಯಲವಕಾಶವಾಗಿದೆ.

ಇಂಗ್ಲೆಂಡಿನಲ್ಲಿ ಸಹಕಾರಪದ್ಧತಿಯು ಈರೀತಿ ಉಚ್ಛ್ರಾಯಸ್ಥಿತಿಯಲ್ಲಿ ಬೆಳೆದುದಕ್ಕೆ ಅಲ್ಲಿಯ ಪ್ರಜೆಗಳ ಸ್ವಸಾಮರ್ಥ್ಯವೇ ಕಾರಣ; ಕಾಲಕ್ರಮದಲ್ಲಿ ಅಗತ್ಯವಾದ ಕಾನೂನುಮಾಡುವುದು, ಸಹಕಾರಿ ಉದ್ಯಮಗಳಿಗೆ ಅವಕಾಶಕೊಡುವುದು ಇವೆರಡು ವಿಧದಲ್ಲಿ ವಿನಾ ಮತ್ತಾವ ವಿಧದಲ್ಲೂ ಆ ದೇಶದ ಸರ್ಕಾರದವರು ಸಹಾಯಮಾಡಿಲ್ಲ. ಸರ್ಕಾರದ ಆಶ್ರಯದಲ್ಲೇ ಹುಟ್ಟಿ ಬೆಳೆದ ಭರತಖಂಡದ ಸಹಕಾರಪದ್ಧತಿಯನ್ನು ವಿಮರ್ಶಿಸುವಾಗ ಇಂಗ್ಲೆಂಡಿನ ಸ್ವಭಾವಸಿದ್ಧವಾದ ಪ್ರಜಾಸಾಮರ್ಥ್ಯದಿಂದ ಬೆಳೆದಿರುವ ಪದ್ಧತಿಯನ್ನು ಮುಖ್ಯವಾಗಿ ಗಮನದಲ್ಲಿಡಬೇಕು.

ಸಹಕಾರ ಪದ್ಧತಿಯ ಮಾರ್ಗವನ್ನು ತೋರಿದವನು ರಾಬರ್ಟ್ ಓವೆ‌ನ್. ಅದರ ಕಾರ್ಯಸಿದ್ಧಿಯ ಜಯಭೇರಿ ಹೊಡೆದವರು ರಾಕ್‌ಡೇಲಿನ ಅಗ್ರಗಾಮಿಗಳು. ಇಂಗ್ಲೆಂಡಿನ ಸಹಕಾರ ಬೆಳವಳಿಗೆಯು ಇವರು ನೆಟ್ಟ ಬೀಜದಿಂದ ವೃದ್ಧಿಯಾದುದು. ಅಗ್ರಗಾಮಿಗಳು ಹೊಡೆದ ಭೇರಿಯ ನಾದ ಕೇಳಿದ ದೇಶಗಳಲ್ಲೆಲ್ಲಾ ಈ ಪದ್ಧತಿಯು ಹರಡಿ ಅಲ್ಲಲ್ಲಿನ ಆರ್ಥಿಕ ಮತ್ತು ಸಾಮಾಜಿಕ ವಾತಾವರಣವನ್ನನುಸರಿಸಿ ವಿವಿಧ ಉದ್ಯಮಗಳಾಗಿ ಬೆಳೆದಿದೆ.

---

## ೩. ಇತರ ದೇಶಗಳಲ್ಲಿ ಅದರ ಹಬ್ಬಿಗೆ

ಪ್ರಪಂಚದ ಮುಖ್ಯದೇಶಗಳಲ್ಲೆಲ್ಲಾ ಸಹಕಾರಪದ್ಧತಿಯು ಹಬ್ಬಿದೆ. ಆದರೆ ಅದು ವಿವಿಧವಾಗಿ ಬೆಳೆದಿರುವುದು ಯೂರೋಪು ಖಂಡದ ಬೇರೆ ಬೇರೆ ದೇಶಗಳಲ್ಲಿ. ಈ ಒಂದೊಂದು ದೇಶದಲ್ಲೂ ಒಂದೊಂದು ವಿಧವಾದ ಸಹಕಾರಪದ್ಧತಿಯು ಮುಂದುವರಿದಿದೆ. ಒಂದೊಂದೂ ಆರ್ಥಿಕಜೀವನದ ಒಂದೊಂದು ಸಮಸ್ಯೆಗೆ ಹೆಚ್ಚು ಗಮನಕೊಟ್ಟಿದೆ. ಇಂಗ್ಲೆಂಡಿನಲ್ಲಿ ಸಹಕಾರಿ ಉಗ್ರಾಣಗಳು ಮುಂದುವರಿದಿವೆಯಾದರೆ, ಡೆನ್ಮಾರ್ಕ್‌ದೇಶದಲ್ಲಿ ಮಾರಾಟದ ಸಂಘಗಳೂ, ಫ್ರಾನ್ಸ್ ಮತ್ತು ಬೆಲ್ಜಿಯಂಗಳಲ್ಲಿ ವಿಮಾ ಸಂಘಗಳೂ, ನಾರ್ವೆ ಮತ್ತು ಸ್ವೀಡನ್‌ಗಳಲ್ಲಿ ಹರಿದು ಛಿದ್ರವಾಗಿರುವ ಹಿಡುವಳಿ ಜಮೀನುಗಳನ್ನು ಒಟ್ಟುಗೂಡಿಸುವ ಸಂಘಗಳೂ, ಜರ್ಮನಿ ಮತ್ತು ಇಟಲಿದೇಶಗಳಲ್ಲಿ ಲೇವಾದೇವಿ (ಪತ್ತು Credit) ಸಂಘಗಳೂ ಸಹಕಾರಪದ್ಧತಿಯನ್ನನುಸರಿಸಿ ಊರ್ಜಿತವಾಗುತ್ತಿವೆ. ಇವೊಂದೊಂದೂ ಒಂದೊಂದು ರೀತಿಯಲ್ಲಿ ಆದರ್ಶಪ್ರಾಯವಾಗಿವೆ. ಭರತಖಂಡದಲ್ಲಿ ಏರ್ಪಟ್ಟಿರುವ ಪತ್ತುಸಂಘಗಳು ವಿಶೇಷವಾಗಿ ಜರ್ಮನಿಯ ಪತ್ತುಸಂಘಗಳನ್ನು ಅನುಸರಿಸಿವೆ. ಇಂಗ್ಲೆಂಡು ಸಹಕಾರಿ ಉಗ್ರಾಣಗಳಿಗೆ ತೌರುಮನೆಯಾದರೆ ಜರ್ಮನಿಯು ಪತ್ತುಸಹಕಾರ ಸಂಘಗಳಿಗೆ ತೌರುಮನೆಯಾಗಿದೆ.

ಜರ್ಮನಿ ದೇಶದ ಲೇವಾದೇವಿ ಸಂಘಗಳು ಎರಡು ಮಾದರಿಯವು. ಒಂದು ಬಗೆಯವು ಗ್ರಾಮಜೀವನಕ್ಕೆ ಯೋಗ್ಯವಾದವು. ಇವುಗಳ ಜನಕ ರೈಫೀಸೆ‍ರ್. ನಗರ ವಾಸಿಗಳಿಗೆ ಬೇಕಾದವು ಎರಡನೆಯ ಮಾದರಿಯವು. ಇವುಗಳಿಗೆ ಕಾರಣ

ಕರ್ತನಾದವನು ಷುಲ್ಸ್ ಎಂಬಾತನು. ಮೊದಲನೆಯುವನ್ನು ರೈಫೀಸೆರ್ ಸಂಘಗಳೆಂದೂ, ಎರಡನೆಯುವನ್ನು ಷುಲ್ಸ್ ಸಂಘಗಳೆಂದೂ ಕರೆಯುವುದು ವಾಡಿಕೆಯಾಗಿದೆ. ನಮ್ಮ ದೇಶದ ಗ್ರಾಮಾಂತರಗಳಲ್ಲಿ ರೈಫೀಸೆರ್ ಸಂಘಗಳೂ, ನಗರಗಳಲ್ಲಿ ಷುಲ್ಸ್ ಸಂಘಗಳೂ ಬಳಕೆಗೆ ಬಂದಿವೆ. ಭಾರತೀಯರ ಆರ್ಥಿಕ ಜೀವನದಲ್ಲಿ ಈ ಎರಡು ಮಾದರಿಯ ಸಂಘಗಳೂ ಬಹಳ ಪರಿಣಾಮಕಾರಿಯಾಗಿರುವುದರಿಂದ ಅವುಗಳ ಸ್ಥಾಪಕರು ಅನುಸರಿಸಿದ ರೀತಿ ನೀತಿಗಳನ್ನು ನಾವು ಪರಿಚಯಮಾಡಿಕೊಳ್ಳುವುದು ಆವಶ್ಯಕ.

ರೈಫೀಸೆರ್ (೧೮೧೮-೧೮೮೮) ತನ್ನ ಮೂವತ್ತನೆಯ ವಯಸ್ಸಿನಲ್ಲಿ—ಎಂದರೆ ೧೮೪೭ ರಲ್ಲಿ—ಒಂದು ಸಣ್ಣ ಹಳ್ಳಿಯಲ್ಲಿ ಬಡಜನರಿಗೆ ದವಸ ಧಾನ್ಯಗಳನ್ನೂ ಆಲೂಗೆಡ್ಡೆಯನ್ನೂ ಸುಲಭವಾಗಿ ದೊರಕಿಸಲು ಒಂದು ಸಹಕಾರ ಸಂಸ್ಥೆಯನ್ನು ಸ್ಥಾಪಿಸಿದನು. ಅದೇ ಸಮಯದಲ್ಲಿ ಜರ್ಮನಿಯಲ್ಲಿ ಅನೇಕ ಕಡೆ ಕ್ಷಾಮ ತಲೆದೋರಿ ಕ್ಷಾಮಪೀಡಿತ ಪ್ರದೇಶಗಳಲ್ಲೆಲ್ಲಾ ಈ ತರಹ ಸಂಘಗಳು ಹುಟ್ಟಿಕೊಂಡುವು. ಇದಾದ ಎರಡುವರ್ಷಗಳನಂತರ ಅವನು ಬೇರೊಂದು ಹಳ್ಳಿಯಲ್ಲಿ ಜಮೀನುದಾರರಿಗೆ ದನಕರುಗಳನ್ನು ಸುಲಭ ಕ್ರಯಕ್ಕೆ ಒದಗಿಸುವ ಸಲುವಾಗಿ ಮತ್ತೊಂದು ಸಂಘ ಸ್ಥಾಪನೆಮಾಡಿದನು. ಅವನು ಸ್ಥಾಪಿಸಿದ ಮೂರನೆಯ ಸಂಘವು ಲೇವಾದೇವಿ ನಡೆಸುವ ಪತ್ತಿನ ಸಂಘ. ಆದರೆ ಈ ಸಂಘದ ಸದಸ್ಯರುಗಳು ತಾವೇ ಸಾಲವನ್ನು ತೆಗೆದುಕೊಳ್ಳದೆ ತಮ್ಮ ಆಧಾರದಮೇಲೆ ಬಂಡವಾಳವನ್ನೊದಗಿಸಿ ಇತರ ಬಡ ವ್ಯವಸಾಯಗಾರರಿಗೆ ಸಾಲಕೊಡುತ್ತಿದ್ದರು. ಈ ರೀತಿ ಸಾಲ ಪಡೆದವರು ಸಂಘದ ಆಡಳಿತದಲ್ಲಿ ಭಾಗವಹಿಸು

ತ್ತಿರಲಿಲ್ಲ ; ನಷ್ಟವೂ ಕೂಡ ಅವರಲ್ಲಿ ಹಂಚಿಕೆಯಾಗುತ್ತಿರಲಿಲ್ಲ. ಸಹಕಾರಪದ್ಧತಿಯ ದೃಷ್ಟಿಯಿಂದ ಇವೆರಡೂ ಲೋಪಗಳೆಂದೇ ಭಾವಿಸಬೇಕು. ಇವು ತನ್ನ ವ್ಯವಸ್ಥೆಯ ಲೋಪಗಳೆಂದು ರೈಫೀಸೆನ್ನನ ಮನಸ್ಸಿಗೂ ಜಾಗ್ರತೆಯಾಗಿಯೇ ಅಂಟಿತು. ಈ ಲೋಪಗಳಿಲ್ಲದ ಒಂದು ಸಂಘವನ್ನು ೧೮೬೨ ರಲ್ಲಿ ಅವನು ಸ್ಥಾಪಿಸಿದನು. ಈ ಸಂಘದ ಆಡಳಿತದಲ್ಲಿ ಸಾಲ ತೆಗೆದುಕೊಳ್ಳುವವರು ಭಾಗಿಗಳಾದುದಲ್ಲದೆ, ಬಂದ ನಷ್ಟವನ್ನು ಪಡೆಯುವುದಕ್ಕೂ ಬಾಧ್ಯರಾದರು. ಈ ಸಂಘದ ಇನ್ನೊಂದು ವಿಶೇಷ ಅಂಶವೇನೆಂದರೆ ಸಾಲ ಪಡೆಯಲು ಜಮೀನು, ಮನೆ, ಒಡವೆ ಇವುಗಳ ಆಧಾರ ಬೇಕಾಗಿರಲಿಲ್ಲ. ಸಾಲಪಡೆಯುವವನು ಪ್ರಾಮಾಣಿಕನಾದ ಪಕ್ಷದಲ್ಲಿ ತನ್ನ ಪ್ರಾಮಾಣಿಕತೆಯ ಆಧಾರದಮೇಲೆ ಸಾಲ ಪಡೆಯಬಹುದಾಗಿತ್ತು. ಇದರಿಂದ ಗುಣಾಢ್ಯರಾದ ಬಡವರಿಗೆ ಸಾಲದ ಮೂಲಕ ಬಂಡವಾಳವನ್ನೊದಗಿಸಿ ಅವರ ಆರ್ಥಿಕ ಜೀವನವನ್ನು ಉತ್ತಮಪಡಿಸುವುದು ಸಾಧ್ಯವಾಯಿತು. ಸಾಲಪಡೆಯುವವನ ಪ್ರಾಮಾಣಿಕತೆ ಸ್ಪಷ್ಟವಾಗಿ ದೃಢಪಡದಿದ್ದ ಸಂದರ್ಭಗಳಲ್ಲಿ ಸದಸ್ಯರಲ್ಲಿ ಒಬ್ಬಿಬ್ಬರು ಸಾಲಕ್ಕೆ ಜಂಟಿಯಾಗಲು ಒಪ್ಪಿದರೆ ಸಾಲಕೊಡುವ ಪದ್ಧತಿ ಏರ್ಪಟ್ಟಿತು. ಇದರಿಂದ ಸಾಲ ಪಡೆದವನ ಆರ್ಥಿಕ ಜೀವನದಲ್ಲಿ ಅವನ ಜಂಟಿದಾರರಾದ ಸ್ನೇಹಿತರುಗಳೂ ಭಾಗಿಗಳಾಗುವಂತಾಯಿತು; ಪರಸ್ಪರ ಸಹಾಯದ ಮೂಲತತ್ವವೂ ಆಚರಣೆಗೆ ಬಂತು.

ಸಾಲಕ್ಕೆ ಬೇಕಾದಷ್ಟು ಮೂಲಧನವನ್ನು ಸೇರಿಸುವುದು ಯಾವಾಗಲೂ ಕಷ್ಟವೆ. ಧನಿಕರಿಂದ ಹಣವನ್ನು ತಂದು ಬಂಡವಾಳವನ್ನು ಕೂಡಿಸುವುದು ಸಾಧ್ಯವಾದರೂ ಸದಸ್ಯರು ಕೂಡಿಟ್ಟ ಹಣದಿಂದಲೇ ಬಂಡವಾಳವನ್ನು ಶೇಖರಿಸುವುದು

ಅತ್ಯುತ್ತಮ ಸಹಕಾರ ನೀತಿ. ಮೊದಲಲ್ಲಿ ಇದನ್ನು ಅನುಸರಿಸಲು ಸಾಧ್ಯವಾಗದೆಹೋಯಿತು. ಹಣಗಾರರಿಂದ ಠೇವಣಿಗಳನ್ನೂ ಸಾಲಗಳನ್ನೂ ಪಡೆಯುವುದು ಅತ್ಯಾವಶ್ಯಕವಾಗಿ ಕಂಡುಬಂದುದರಿಂದ ರೈಫೀಸೆನ್ನನು ತನ್ನ ಸ್ಥಳದಲ್ಲೇ ಕೈಲಾದ ಮಟ್ಟಿಗೆ ಹಣಕೂಡಿಸಲು ಉದ್ಯುಕ್ತನಾದನು. ಇದೂ ಸಾಧ್ಯವಿಲ್ಲದಿದ್ದಾಗ ಹೊರಗಡೆಯಿಂದ ಬಂಡವಾಳವನ್ನು ಪಡೆದನು.

ಬಂಡವಾಳವನ್ನು ಈ ರೀತಿ ಒದಗಿಸಿಕೊಳ್ಳಲು ಸಂಘವೇನೋ ಸಿದ್ಧವಾಗಿರಬಹುದು. ಆದರೆ ಬಂಡವಾಳಗಾರರು ಯಾವ ನಂಬಿಕೆಯ ಮೇಲೆ ಹಣ ಕೊಡುವರು ? ಬಂಡವಾಳಗಾರರಲ್ಲಿ ನಂಬಿಕೆಯನ್ನು ಹುಟ್ಟಿಸಲು ರೈಫೀಸೆನ್ನನು ಸಂಘದ ಸದಸ್ಯರ ಜವಾಬ್ದಾರಿಯನ್ನು ಅನಿಯಮಿತವಾಗಿ ಮಾಡಬೇಕಾಯಿತು. ಇದರ ಪ್ರಕಾರ ಸಂಘವು ಮಾಡುವ ಎಲ್ಲಾ ತರಹ ಸಾಲಗಳನ್ನು ತೀರಿಸುವ ಜವಾಬ್ದಾರಿಯು ಒಂಟಿಯಾಗಿಯಾಗಲಿ ಜಂಟಿಯಾಗಿಯಾಗಲಿ ಸದಸ್ಯರುಗಳಿಗೆಲ್ಲಾ ಸೇರಿದುದಾಯಿತು. ಸಾಲ ತೆಗೆದಿರಲಿ ಇಲ್ಲದಿರಲಿ ಪ್ರತಿಯೊಬ್ಬ ಸದಸ್ಯನೂ ಸಂಘದ ದೇಣಿಗೆ ಸಂಪೂರ್ಣ ಜವಾಬ್ದಾರಿ ವಹಿಸುವುದು ಈ ಅನಿಯಮಿತ ಜವಾಬ್ದಾರಿ ತತ್ವದ ಉದ್ದೇಶ. ಈ ರೀತಿ ಭದ್ರವಾದ ಖಾತರಿಯ ಮೇಲೆ ಯಾರು ತಾನೆ ಬಂಡವಾಳವನ್ನೊದಗಿಸಲು ಹಿಂಜರಿಯುವರು ?

ಆಸ್ತಿವಂತರು ಗುಣಾಢ್ಯರಾದ ಬಡ ಸದಸ್ಯರೊಂದಿಗೆ ಸೇರಿ ಅನಿಯಮಿತ ಜವಾಬ್ದಾರಿಯ ಮೇಲೆ ಬಂಡವಾಳವನ್ನು ಕೂಡಿಸುವ ತತ್ವ ಎಷ್ಟು ಸ್ಪಷ್ಟವೋ, ಈ ತತ್ವದ ಆಧಾರದ ಮೇಲೆ ಸದಸ್ಯರನ್ನು ಒಟ್ಟು ಕೂಡಿಸುವುದು ಅಷ್ಟೇ ಕಷ್ಟವಾದುದು. ಅನುಕೂಲಸ್ಥರಾದ ಆಸ್ತಿವಂತರು ಅನಿಯಮಿತ

ಜವಾಬ್ದಾರಿಯು ಸಂಘದ ಸದಸ್ಯರಾಗಲು ಬಡಪೆಟ್ಟಿಗೆ ಒಪ್ಪುವು ದಿಲ್ಲ. ಸಂಘದ ಇತರ ಸದಸ್ಯರು ಶೀಲವಂತರು, ಪ್ರಾಮಾಣಿಕರು, ಎಂಬುದನ್ನು ಅವರಿಗೆ ಸ್ಪಷ್ಟಪಡಿಸಬೇಕು. ಆದುದರಿಂದ ರೈಫೀಸೆನ್ನನು ಸಂಘಕ್ಕೆ ಗುಣಾಢ್ಯರನ್ನೇ ಸದಸ್ಯರನ್ನಾಗಿ ಆರಿಸಿಕೊಳ್ಳುವುದನ್ನು ಆಚರಣೆಗೆ ತರಬೇಕಾಯಿತು. ಇದರಲ್ಲಿ ಅವನು ಜಯಶೀಲನಾದನು. ರೈಫೀಸೆರ್ ಸಂಘದ ಸದಸ್ಯನೆಂದರೆ ಗುಣಾಢ್ಯನೆಂಬ ನಂಬಿಕೆ ಜನರಲ್ಲಿ ಬೇರೂರಿತು. ಇದರಿಂದ ಸಹಕಾರ ಸಂಸ್ಥೆಯು ಶೀಲವಂತರ ಸಂಘ, ಗುಣವೇ ಸಹಕಾರದ ಗಂಟು ಎಂಬುದು ಸ್ಥಿರಪಟ್ಟಿತು. ಪರಸ್ಪರ ಸಹಾಯಸಂಘದಲ್ಲಿ ಗುಣವೇ ಗಂಟಾದುದರಿಂದ ಅವರ ಸದಸ್ಯತ್ವದ ವಿಚಾರದಲ್ಲಿ ಕೆಲವು ನಿಬಂಧನೆಗಳು ಆಚರಣೆಗೆ ಬಂದುವು. ಇವು ಯಾವುವೆಂದರೆ ಸದಸ್ಯನಾಗುವವನು ಸಂಘದ ಇತರ ಸದಸ್ಯರಿಗೆ ಚೆನ್ನಾಗಿ ಪರಿಚಿತನಾಗಿರಬೇಕು. ಅವನ ಪ್ರಾಮಾಣಿಕತೆಯಲ್ಲಿ ಇತರರಿಗೆ ನಂಬಿಕೆ ಇರಬೇಕು. ಪರಸ್ಥಳದವರಿಗೆ ಸದಸ್ಯರಾಗಲು ಅವಕಾಶವಿಲ್ಲ. ಸಾಲಗಳು ಸದಸ್ಯರುಗಳಿಗೆ ಮಾತ್ರ ಒದಗಿಸುವುದು. ಸಾಲದ ಉದ್ದೇಶವು ಸದಸ್ಯನ ಜೀವನವನ್ನು ಉತ್ತಮಪಡಿಸತಕ್ಕದ್ದಾಗಿರಬೇಕು; ಮತ್ತು ಉದ್ದೇಶವು ಪಂಚಾಯತರು ಒಪ್ಪತಕ್ಕದ್ದಾಗಿರಬೇಕು; ಮತ್ತು ಸಾಲದ ಹಣದ ವಿನಿಯೋಗ ಅವರ ಮೇಲ್ವಿಚಾರಣೆಗೆ ಒಳಪಟ್ಟಿರಬೇಕು.

ಈ ನಿಬಂಧನೆಗಳಿಗೊಳಪಟ್ಟು ಸಂಘದ ಸದಸ್ಯರಿಗೆ ಸರ್ವಸಮವಾದ ಹಕ್ಕೂ ಸಂಪೂರ್ಣ ಸ್ವಾತಂತ್ರ್ಯವೂ ಉಂಟು.

ರೈಫೀಸೆರ್ ಸಂಘಗಳು ಜರ್ಮನಿಯ ರೈತಾಪಿಜನಗಳಿಗೆ ಬಹಳ ಉಪಯುಕ್ತವಾಗಿ ಕಂಡುಬಂದುದರಿಂದ ದೇಶದಲ್ಲೆಲ್ಲಾ ಹರಡಿದುವು. ಇದರ ಪರಿಣಾಮವಾಗಿ ರೈತರ ಬದುಕೂ ಬಾಳೂ

ಉತ್ತಮಗೊಂಡುವು. ರೈತರು ತಮಗೆ ಬೇಕಾದ ಸಲಕರಣೆಗಳನ್ನೆಲ್ಲಾ ಸುಲಭ ದರದಲ್ಲಿ ಕೊಳ್ಳಲೂ, ಸಾಲಸೋಲಗಳನ್ನು ಸುಲಭವಾಗಿ ತೀರಿಸಲೂ, ತಮ್ಮ ಸಂಪಾದನೆಯ ಸ್ವಲ್ಪ ಭಾಗವನ್ನು ಕೂಡಿಡಲೂ ಅನುಕೂಲವಾಯಿತು. ಮಿತವ್ಯಯದ ಅಭ್ಯಾಸ ಬೇರೂರಿ ಸಾಹುಕಾರರ ಸೊಕ್ಕು ಸ್ವಲ್ಪಮಟ್ಟಿಗೆ ಮುರಿಯಿತು.

ಇದಿಷ್ಟೂ ರೈಫೀಸೆನ್ನಿನ ಸಹಕಾರದ ಮಾರ್ಗ. ಇನ್ನು ಪಟ್ಟಣಗಳಲ್ಲಿ ಏರ್ಪಾಟಾದ ಷುಲ್ಸನ ಸಹಕಾರ ಮಾರ್ಗವನ್ನು ಪರಿಶೀಲಿಸಬಹುದು.

ಹಳ್ಳಿಗಳ ರೈತರ ಆರ್ಥಿಕ ಜೀವನವನ್ನು ಸುಗಮವಾಗಿ ಮಾಡುವುದು ರೈಫೀಸೆನ್ ಸಂಘದ ಧ್ಯೇಯವಾದರೆ ಪಟ್ಟಣಗಳಲ್ಲಿರುವ ಕೆಲಸಗಾರರ ಆರ್ಥಿಕ ಜೀವನವನ್ನು ಉತ್ತಮಗೊಳಿಸುವುದು ಷುಲ್ಸ್ ಸಂಘದ ಧ್ಯೇಯವಾಗಿತ್ತು. ಇದರ ನಿರ್ಮಾಪಕನಾದ ಷುಲ್ಸನು (೧೮೦೮-೧೮೮೩) ಬಡಗಿ, ಚಮ್ಮಾರ ಮುಂತಾದ ಕೆಲಸಗಾರರ ಜೀವನಸ್ಥಿತಿಯನ್ನು ಚನ್ನಾಗಿ ಅರಿತಿದ್ದವನು. ಕೈ ಕಸಬುಗಳಲ್ಲಿ ಉದ್ಯುಕ್ತರಾಗಿದ್ದ ಕೆಲಸಗಾರರು ತಮ್ಮ ಕಸಬಿಗೆ ಬೇಕಾದ ಬಂಡವಾಳವನ್ನೊದಗಿಸಿಕೊಳ್ಳಲು ಮಾರ್ಗವಿಲ್ಲದೆ ತೊಂದರೆಪಡುತ್ತಿದ್ದುದನ್ನು ನೋಡಿದ್ದನು. ೧೮೪೯ರಲ್ಲಿ ಚಮ್ಮಾರರಿಗೆ ಸಾಮಾನೊದಗಿಸುವ ಒಂದು ಸಹಕಾರ ಸಂಸ್ಥೆಯನ್ನು ಸ್ಥಾಪಿಸಿದನು. ಇದಕ್ಕೆ ಸೇರಿ ಅದನ್ನು ನಡೆಸಿದ ಕೆಲಸಗಾರರಿಗೆ ತಾವು ಸ್ವಶಕ್ತಿ ಸ್ವಸಾಮರ್ಥ್ಯದಿಂದ ಏನನ್ನಾದರೂ ಸಾಧಿಸಲವಕಾಶವಾಗುವುದೆಂಬುದು ಅನುಭವವಾಯಿತು. ೧೮೫೦ ರಲ್ಲಿ ನಗರ ವಾಸಿಗಳಾದ ವಿವಿಧ ಕಸಬಿನ ಕೈಕೆಲಸದವರಿಗೆ ಬಂಡವಾಳವನ್ನೊದಗಿಸಲು ಇನ್ನೊಂದು ಸಂಘವನ್ನು

ಏರ್ಪಡಿಸಿದನು. ಈ ಸಂಸ್ಥೆಯೇ ಅವನ ಹೆಸರನ್ನು ತಾಳಿ ಈಗ ಜಗದ್ವಿಖ್ಯಾತವಾಗಿರುವ ಸಂಘಗಳಿಗೆ ಮೇಲ್ಪಂಕ್ತಿಯಾದ ಸಂಘ.

ಈ ಷುಲ್ಸ್ ಸಂಘಗಳ ಮಾದರಿಯೇ ಬೇರ. ಇವುಗಳಿಗೂ ರೈಫೀಸೆನ್ ಸಂಘಗಳಿಗೂ ಅನೇಕ ವಿಧಗಳಲ್ಲಿ ವ್ಯತ್ಯಾಸಗಳಿವೆ. ಇವು ಪರಸ್ಪರ ಹೆಚ್ಚು ಪರಿಚಯವಿಲ್ಲದ ನಗರ ವಾಸಿಗಳಿಗೆ ಅನುಕೂಲಿಸುವಂತೆ ನಿಯಮಿತ ಜವಾಬ್ದಾರಿಯ ಆಧಾರದ ಮೇಲೆ ಕೆಲಸ ಮಾಡತಕ್ಕವುಗಳು. ಬೇಕಾದ ಬಂಡವಾಳವನ್ನು ಷೇರು ಹಣದಿಂದಲೂ, ಹೊರಗಿನ ಸಾಲಗಳಿಂದಲೂ ಒದಗಿಸಿ ಕೊಳ್ಳುವುವು. ಸದಸ್ಯರುಗಳ ಜವಾಬ್ದಾರಿಯು ಅವರುಗಳು ಪಡೆದಿರತಕ್ಕ ಷೇರುಗಳ ಮೊತ್ತಕ್ಕೆ ಮೀರದಂತಿರುವುದರಿಂದ ಅವರವರ ಶಕ್ತಿಗನುಸಾರವಾಗಿ ಜವಾಬ್ದಾರಿಯನ್ನು ವಹಿಸಲು ಸಾಧ್ಯ. ಕಾರ್ಯಕ್ಷೇತ್ರವು ಹೆಚ್ಚು ವಿಸ್ತಾರವಾದುದು. ವಿವಿಧ ಕಸಬಿನವರಾದರೂ ಒಟ್ಟು ಕೂಡಿ ಕೆಲಸಮಾಡಲು ಅವಕಾಶ ವನ್ನೊದಗಿಸಿ ಕೊಡುವುದು ಈ ಸಂಘಗಳಿಗೆ ಸಾಧ್ಯ. ಬಂಡ ವಾಳ ಪ್ರಭುತ್ವ ಸಂಸ್ಥೆಗಳಂತೆಯೇ ಕಾರ್ಯಾಚರಣೆಗಳನ್ನು ಕೈ ಕೊಂಡರೂ ಸಹಕಾರ ಪದ್ಧತಿಯ ಮೂಲತತ್ವಗಳಿಗನುಗುಣ ವಾಗಿ ಸದಸ್ಯರುಗಳ ಸ್ಥಿತಿಗತಿಗಳನ್ನು ಉತ್ತಮಪಡಿಸಲು ಷುಲ್ಸ್ ಸಂಘಗಳು ಅವಕಾಶವನ್ನಿತ್ತುವು.

ಇಂಗ್ಲೆಂಡಿನಂತೆಯೇ ಜರ್ಮನಿಯಲ್ಲಿಯೂ ಸಹಕಾರ ಸಂಸ್ಥೆಗಳು ಖಾಸಗಿ ಪ್ರಯತ್ನಗಳಿಂದಲೇ ಉದ್ಭಾರವಾದುವು. ಸರಕಾರದ ಬೆಂಬಲವು ಕಾಲಕ್ರಮದಲ್ಲಿ ಒದಗಿದರೂ ರೈಫೀಸೆನ್ ಮತ್ತು ಷುಲ್ಸ್ ಇಬ್ಬರ ಸಮಾಜಸೇವಾಕಾಂಕ್ಷೆಯೇ ಇವು ಹುಟ್ಟಿ ಬೆಳೆಯುವುದಕ್ಕೆ ಮುಖ್ಯ ಕಾರಣ.

ಜರ್ಮನಿಯಲ್ಲಿ ಕೈಗೂಡಿದ ಈ ಉದ್ಯಮಗಳು ಇಟಲಿದೇಶ

ದಲ್ಲೂ ಪ್ರಚಾರಕ್ಕೆ ಬಂದುವು. ಇವುಗಳ ಪ್ರಚಾರಕ್ಕೆ ಕಾರಣ ನಾದವನು ಲುಝುಟಿ (೧೮೪೧-೧೯೨೭). ಇವನು ಷುಲ್ಸನು ತೋರಿಸಿಕೊಟ್ಟ ಮಾರ್ಗವನ್ನನುಸರಿಸಿ ಇಟಲಿ ದೇಶದಲ್ಲಿ ಲೇವಾದೇವಿ ಸಂಘಗಳನ್ನೇರ್ಪಡಿಸಿದನು. ಈ ಉದ್ಯಮದಲ್ಲಿ ಷುಲ್ಸನ ತತ್ವಗಳನ್ನು ತನ್ನ ದೇಶದ ಆರ್ಥಿಕಸ್ಥಿತಿಗಳಿಗೆ ಹೊಂದು ವಂತೆ ತಕ್ಕ ಬದಲಾವಣೆಗಳನ್ನು ಮಾಡಿ ರೂಪಗೊಳಿಸಿರುವುದ ರಿಂದ ಆ ಮಾದರಿ ಸಂಘಗಳಿಗೆ ಲುಝುಟಿ ಸಂಘಗಳೆಂದು ಹೆಸರು ಬಂದಿದೆ.

ಜರ್ಮನಿ ಮತ್ತು ಇಟಲಿ ಮಾದರಿಯ ಸಹಕಾರ ಲೇವಾ ದೇವಿ ಸಂಘಗಳು ಪ್ರಪಂಚದ ನಾನಾ ದೇಶಗಳಲ್ಲಿ ಹರಡಿ ಜನ ರಿಗೆ ಅಧಿಕ ಪ್ರಯೋಜನವನ್ನುಂಟುಮಾಡಿವೆ.

ನಮ್ಮ ಭರತಖಂಡಕ್ಕೆ ಸಹಕಾರ ಮಾರ್ಗದಲ್ಲಿ ಆದರ್ಶ ವಾದ ಮತ್ತೊಂದು ದೇಶವೆಂದರೆ ಡೆನ್ಮಾರ್ಕ್. ಆ ದೇಶದ ವಿಸ್ತೀರ್ಣವು ೧೬,೫೦೦ ಚದರ ಮೈಲಿಗಳು. ಪ್ರಜಾಸಂಖ್ಯೆ ೩೫ ಲಕ್ಷ. ೧೮೬೪ ರಲ್ಲಿ ಜರ್ಮನಿಯೊಡನೆ ಯುದ್ಧಮಾಡ ಬೇಕಾಗಿಬಂದು ಅದರ ಪರಿಣಾಮವಾಗಿ ತನ್ನ ಫಲವತ್ತಾದ ಕೆಲವು ಭಾಗಗಳನ್ನು ಕಳೆದುಕೊಂಡಿತು. ಉಳಿದ ಭಾಗಗಳು ಅಷ್ಟು ಫಲವತ್ತಾದುವಲ್ಲ. ಆದರೂ ಆ ದೇಶದ ಜನರಾದ ಡೇನರು ಇದ್ದುದರಲ್ಲೇ ಶಾಂತಮಾರ್ಗದಲ್ಲಿ ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಲು ಶಪಥಮಾಡಿದರು. ಈ ಮೂಲಕ ತಮ್ಮ ಶಪಥಸಾಧನೆಯಾಗಬೇಕಾದರೆ ಸಹಕಾರ ಪದ್ಧತಿಯ ಆಚರಣೆಯೇ ಸುಲಭಮಾರ್ಗವೆಂದರಿತು, ಎಲ್ಲಾ ಉದ್ಯಮಗಳನ್ನೂ ಸಹಕಾರ ಪದ್ಧತಿಗನುಸಾರವಾಗಿ ನಡೆಸುತ್ತಾ ಬಂದರು. ೧೮೬೬ ರಲ್ಲಿ ಮೊದಲನೆಯ ಸಹಕಾರ ಸಂಸ್ಥೆ

ಆರಂಭವಾಗಿ ಅಂದಿನಿಂದ ಏಕಪ್ರಕಾರವಾಗಿ ವೃದ್ಧಿಹೊಂದಿ, ಈಚಿನವರೆಗೆ ಹದಿನೇಳುಲಕ್ಷ ಸದಸ್ಯರುಗಳನ್ನೊಳಕೊಂಡ ಏಳು ಸಾವಿರ ಸಹಕಾರ ಸಂಸ್ಥೆಗಳು ಆ ದೇಶದಲ್ಲಿ ಕೆಲಸಮಾಡುತ್ತಿವೆ. ಡೇನರಿಗೆ ಸಹಕಾರಸಂಸ್ಥೆಗಳನ್ನೇರ್ಪಡಿಸಿ ಆರ್ಥಿಕ ಉದ್ಯಮಗಳನ್ನು ಕೈಕೊಳ್ಳುವುದೆಂದರೆ ಸ್ವಾಭಾವಿಕವಾಗಿದೆ. ಪ್ರತಿಯೊಂದು ವಸ್ತುವಿನ ಉತ್ಪತ್ತಿ, ಮಾರಾಟ ಮತ್ತು ಕೊಳ್ಳುವಿಕೆ—ಇವೆಲ್ಲವೂ ಸಹಕಾರ ಸಂಸ್ಥೆಗಳ ಮೂಲಕವೇ ನಡೆಯುವುವು. ಈ ದೇಶದಲ್ಲಿ ಉತ್ಪತ್ತಿಯಾಗುವ ಮುಖ್ಯ ವಸ್ತುಗಳು ಹಾಲು, ಕೆನೆ, ಬೆಣ್ಣೆ, ಕೋಳಿಯಮೊಟ್ಟೆ ಮತ್ತು ತರಹಾವರಿ ಮಾಂಸಗಳು. ಪಶುಪಾಲನೆಯ ಈ ವಿವಿಧ ಉತ್ಪನ್ನಗಳನ್ನು ಬಹು ನಿಪುಣತೆಯಿಂದ ವ್ಯವಸ್ಥೆಗೊಳಿಸಿ ಡೇನರು ಪ್ರಬಲವಾದ ರಫ್ತು ವ್ಯಾಪಾರವನ್ನು ಏರ್ಪಡಿಸಿರುವರು. ಸಹಕಾರ ಸಂಸ್ಥೆಯೊದಗಿಸಿದ ಮಾಲಿನಲ್ಲಿ ಗಿರಾಕಿಗಳಿಗೆ ಹೆಚ್ಚು ನಂಬಿಕೆಯುಂಟಾಗಿ ಅದಕ್ಕೆ ಹೆಚ್ಚು ಬೆಲೆ ದೊರಕುವಂತಾಯಿತು. ಡೆನ್ಮಾರ್ಕಿನ ಉತ್ಪತ್ತಿಗಳಲ್ಲಿ ಶೇಕಡ ೯೦ ರಷ್ಟು ಬೆಣ್ಣೆಯನ್ನೂ, ೭೦ ರಷ್ಟು ಮಾಂಸವನ್ನೂ ಸಹಕಾರ ಸಂಸ್ಥೆಗಳೇ ತಯಾರಿಸುತ್ತಿವೆ. ವಿದೇಶ ವ್ಯಾಪಾರದಲ್ಲಿ ಶೇಕಡ ೯೦ ರಷ್ಟು ಹಾಲಿನ ವ್ಯಾಪಾರವೂ ಶೇಕಡ ೫೦ ರಷ್ಟು ಕೋಳಿಮೊಟ್ಟೆ ವ್ಯಾಪಾರವೂ ಸಹಕಾರ ಸಂಸ್ಥೆಗಳ ಕೈಯಲ್ಲಿದೆ. ಇಷ್ಟಲ್ಲದೆ ವ್ಯವಸಾಯಕ್ಕೆ ಬೇಕಾದ ಸಾಮಾನುಗಳಲ್ಲಿ ಶೇಕಡ ೮೦ ರಷ್ಟು ಭಾಗವನ್ನು ಸಹಕಾರ ಸಂಘಗಳು ಒದಗಿಸುತ್ತಿವೆ.

ಡೆನ್ಮಾರ್ಕಿನಲ್ಲಿ ಸಹಕಾರ ವ್ಯವಸ್ಥೆಯು ಇಷ್ಟು ಉನ್ನತ ಸ್ಥಿತಿಗೆ ಬಂದಿರುವುದಕ್ಕೆ ಆ ದೇಶದ ವಿದ್ಯಾಪ್ರಚಾರವೇ ಕಾರಣ. ಶಿಕ್ಷಣ ಶಾಸ್ತ್ರಜ್ಞರು ಅಲ್ಲಿನ ವಿದ್ಯಾಭ್ಯಾಸದ ಕ್ರಮ

ವನ್ನು ಮೆಚ್ಚಿ ಹೊಗಳುವರು. ಅಲ್ಲಿನ ವಿದ್ಯಾಭ್ಯಾಸದ ಪರಿಣಾಮವಾಗಿ ಅಲ್ಲಿನ ರೈತರುಗಳು ಮ್ಯುನಿಸಿಪಾಲಿಟಿ ಮುಂತಾದ ಸ್ಥಳೀಯ ಸಂಸ್ಥೆಗಳಲ್ಲೂ ಪ್ರಜಾಪ್ರತಿನಿಧಿ ಸಭೆಗಳಲ್ಲೂ ಗಣ್ಯ ಸದಸ್ಯರಾಗಿರುವರು. ದೇಶದ ಸರಕಾರದ ಮಂತ್ರಿಮಂಡಲದಲ್ಲಿ ಸೇರಿ ದೇಶಸೇವೆ ಸಲ್ಲಿಸಬೇಕೆಂಬ ಕುತೂಹಲವು ಆ ದೇಶದ ರೈತಾಪಿ ಜನರ ಮಕ್ಕಳಲ್ಲಿ ವಿಶೇಷವಾಗಿದೆ. ವಿದ್ಯಾಪ್ರಚಾರ ಮತ್ತು ಸಹಕಾರಪದ್ಧತಿ ಇವೆರಡರ ಪರಸ್ಪರ ಬೆಂಬಲದಿಂದುಂಟಾದ ಪ್ರಗತಿಯು ಡೇನರನ್ನು ಒಂದು ಆದರ್ಶ ರೈತಜನಾಂಗವನ್ನಾಗಿ ಮಾಡಿದೆ. ಅವರು ಸೌಮ್ಯವಾದ ಜನ; ಶಾಂತಿಪ್ರಿಯರು. ಆ ದೇಶದಲ್ಲಿ ಧನಿಕರಿಗೂ ಸಾಮಾನ್ಯ ಮನುಷ್ಯರಿಗೂ ಹೆಚ್ಚು ಭೇದವಿಲ್ಲ. ಎಲ್ಲರೂ ಒಟ್ಟುಗೂಡಿ ಸರ್ವ ಸಮದೃಷ್ಟಿಯಿಂದ ಕೆಲಸ ನಡೆಸಿ, ಸುಖಸಂಪತ್ತುಗಳನ್ನು ಹೊಂದಿ ಸಂತೋಷದಿಂದ ಜೀವಿಸುತ್ತಿರುವರು. ಇದಕ್ಕೆಲ್ಲಾ ಮೂಲಕಾರಣ ಅವರ ಸಹಕಾರಪದ್ಧತಿ. ಹಿಂದುಳಿದಿರುವ ಭಾರತೀಯರಾದ ನಮಗೆ ಮಾತ್ರ ಡೇನರ ಸಹಕಾರ ಪದ್ಧತಿಯು ಬರಿಯ ಹಗಲು ಕನಸಾಗಿದೆ.

ಅಮೆರಿಕಾದ ಸಂಯುಕ್ತ ಸಂಸ್ಥಾನಗಳೂ ಮತ್ತು ಕೆನಡಾ ದೇಶವೂ ಡೆನ್ಮಾರ್ಕಿನಂತೆಯೇ ಮಾರಾಟದ ಸಂಘಗಳನ್ನೇರ್ಪಡಿಸಿವೆ. ಸಂಯುಕ್ತ ಸಂಸ್ಥಾನಗಳಲ್ಲಿ ಈಗಾಗಲೇ ಶೇಕಡ ೬೦ ರಷ್ಟು ಧಾನ್ಯ ಮತ್ತು ಹೊಗೆಸೊಪ್ಪೂ, ಶೇಕಡ ೪೦ ರಷ್ಟು ಹಣ್ಣು ಮತ್ತು ತರಕಾರಿಯೂ, ಶೇಕಡ ೨೮ ರಷ್ಟು ಹಾಲು ಮತ್ತು ಖೋವಾ ಇವುಗಳ ವ್ಯಾಪಾರವೂ ಸಹಕಾರ ಸಂಸ್ಥೆಗಳ ಹತೋಟಿಯಲ್ಲಿವೆ. ಕ್ಯಾಲಿಫೋರ್ನಿಯಾ ಸಂಸ್ಥಾನದಲ್ಲಿ ನಿಂಬೆ, ಕಿತ್ತಳೆ, ಸೇಬು ಮೊದಲಾದ ಹಣ್ಣುಗಳ ವ್ಯಾಪಾರವೆಲ್ಲಾ

ಸಾಮಾನ್ಯವಾಗಿ ಸಹಕಾರ ಸಂಸ್ಥೆಗಳ ಮೂಲಕವೇ ನಡೆಯು ತ್ತಿದೆ. ಸಂಯುಕ್ತ ಸಂಸ್ಥಾನಗಳಲ್ಲಿ ಸಹಕಾರ ಪದ್ಧತಿಯು ವಿಶೇಷವಾಗಿ ಮನ್ನಣೆಯನ್ನು ಪಡೆದಿದ್ದರೂ ಆ ದೇಶದ ಸಹ ಕಾರಿಗಳು ಈಗಲೂ ಯೂರೋಪ್ ದೇಶಗಳ ಕ್ರಮಗಳನ್ನೇ ಆದರ್ಶವಾಗಿಟ್ಟುಕೊಂಡಿರುವರೆಂಬುವನ್ನು ಮಾತ್ರ ಮರೆಯ ಲಾಗದು. ಆಗಿಂದಾಗ್ಗೆ ಸಹಕಾರ ಪದ್ಧತಿಯ ಶಿಕ್ಷಣಕ್ಕಾಗಿ ವಿದ್ಯಾರ್ಥಿಗಳನ್ನೂ ಅದರ ಪರಿಶೀಲನೆಗಾಗಿ ಅಧಿಕಾರಿಗಳನ್ನೂ ಸಮಿತಿಗಳನ್ನೂ ಆ ದೇಶಗಳಿಗೆ ಕಳುಹಿಸುತ್ತಿರುವರು.

ಪಾಶ್ಚಾತ್ಯ ದೇಶಗಳಲೆಲ್ಲಾ ರಷ್ಯಾದೇಶವು ಸಹಕಾರ ಪದ್ಧ ತಿಯಲ್ಲಿ ಬಹಳ ಮುಂದುವರಿದಿರುವಂತೆ ಅಂಕಿ ಅಂಶಗಳಿಂದ ಕಾಣಬರುವುದು. ಆ ದೇಶದಲ್ಲಿ ಈಗ ಎಲ್ಲೆಲ್ಲೂ ಸಹಕಾರ ಸಂಸ್ಥೆಗಳೇ. ಮೂರು ಮನೆಯ ಹಳ್ಳಿಯಲ್ಲಿಯೂ ಒಂದು ಸಹ ಕಾರಿ ಉಗ್ರಾಣವಿದೆ. ಆ ದೇಶದ ಸಹಕಾರ ಸಂಸ್ಥೆಗಳ ಒಟ್ಟು ಸದಸ್ಯರ ಸಂಖ್ಯೆ ಏಳು ಕೋಟಿಗೆ ಮೀರಿದೆ. ಆರ್ಥಿಕ ಜೀವನ ವೆಲ್ಲವೂ ಸಹಕಾರ ಪದ್ಧತಿಯ ಶಿಸ್ತಿಗೆ ಒಳಪಟ್ಟಿರುವಂತೆ ಕಂಡುಬರುವುದು. ಇವನ್ನು ನೋಡಿದರೆ ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿ ಇಂಗ್ಲೆಂಡಿನಲ್ಲಿ ಹುಟ್ಟಿದ ಸಹ ಕಾರ ಪದ್ಧತಿಯು ತನ್ನ ಉನ್ನತಿಯ ಶಿಖರವನ್ನು ಈಗ ರಷ್ಯಾ ದೇಶದಲ್ಲಿ ಮುಟ್ಟಿರುವುದಾಗಿ ಹೇಳಬಹುದು. ಆದರೆ ಈಗಿನ ರಷ್ಯಾದೇಶದ ಸಹಕಾರ ಪದ್ಧತಿಯಲ್ಲಿ ಐಚ್ಛಿಕ ಮತ್ತು ಸ್ವತಂತ್ರ ಸದಸ್ಯತ್ವಕ್ಕೆ ಅವಕಾಶವಿಲ್ಲ. ಸಹಕಾರವೂ ಅಲ್ಲಿನ ಸರ್ಕಾರದ ಪ್ರಭುತ್ವದವರ ಆಡಳಿತಕ್ಕೆ ಒಳಪಟ್ಟಿರುವುದರಿಂದ ವ್ಯಕ್ತಿ ಸ್ವಾತಂ ತ್ರ್ಯಕ್ಕಾಗಲಿ ಖಾಸಗಿಯಾಗಿ ಆಸ್ತಿಯನ್ನು ಕೂಡಿಸುವುದಕ್ಕಾಗಲಿ ಅವಕಾಶವಿಲ್ಲ. ಅಲ್ಲಿಯ ಈಗಿನ ಸಹಕಾರ ಸಂಘಗಳು ಲಾಭದ

ಹಂಚಿಕೆಯನ್ನೇ ಕಂಡರಿಯುವು. ಕೆಲಸವೆಲ್ಲವೂ ಸಾಮೂಹಿಕ ದೃಷ್ಟಿಯಿಂದ ನಡೆಯುವುದು. ಆ ದೇಶದಲ್ಲಿ ಈಗ ನೆಲಸಿರುವ ಸಮಾಜಸಮತಾವಾದ ಪ್ರಭುತ್ವವು ಹಿಂದಿನಿಂದಲೂ ನಡೆದು ಬಂದಿದ್ದ ಸಹಕಾರ ಸಂಘಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ಅವುಗಳ ಮೂಲಕ ಜನಗಳಿಗೆ ಅನುಕೂಲ ಮಾಡಿಕೊಟ್ಟಿದೆ. ಅವುಗಳನ್ನು ಸಮಾಜಸಮತಾವಾದ ಕ್ರಮದ ಸೇವೆಗಾಗಿ ರೂಪಾಂತರ ಗೊಳಿಸಿಕೊಂಡ ಸಾಮೂಹಿಕಸಮತಾ ಸಂಸ್ಥೆಗಳೆನ್ನಬೇಕೇ ಹೊರತು ಸಹಕಾರ ಪದ್ಧತಿಗನುಸಾರವಾಗಿ ಕೆಲಸ ಮಾಡುತ್ತಿರುವ ಸ್ವತಂತ್ರ ಸಂಸ್ಥೆಗಳೆಂದು ಹೇಳುವುದು ಕಷ್ಟ.

ಇದೇ ರೀತಿ ಈಗಿನ ಇಟಲಿಯಲ್ಲೂ ಜರ್ಮನಿಯಲ್ಲೂ ಸಹ ಸಹಕಾರಸಂಸ್ಥೆಗಳು ಆಯಾ ಸರ್ಕಾರಗಳ ಪ್ರಭುತ್ವ ಬಲದಿಂದ ಅಭಿವೃದ್ಧಿ ಹೊಂದುತ್ತಿವೆ. ಆಯಾ ಜನಾಂಗದ ಆರ್ಥಿಕ ಮುಂದೋಟದಲ್ಲಿ ಸಹಕಾರ ಸಂಸ್ಥೆಗಳಿಗೂ ನಿರ್ದಿಷ್ಟ ಸ್ಥಾನವಿದೆ. ಸಹಕಾರ ಸಂಸ್ಥೆಗಳು ಒಂದರೊಂದಿಗೊಂದು ಬೆರೆತು, ಒಟ್ಟಿಗೆ ಕಲೆತು ಆರ್ಥಿಕವ್ಯವಸ್ಥೆಗಳನ್ನು ಬಹು ದಕ್ಷತೆಯಿಂದ ಮುಂದುವರಿಸುತ್ತಿವೆ. ಆದರೆ ಈ ರಚನೆಯಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಸ್ಥಾನವಿದೆಯೆ ಎಂಬುದು ಚರ್ಚಾಸ್ಪದವಾದ ವಿಷಯ. ಸಹಕಾರ ಪದ್ಧತಿ ಹುಟ್ಟಿ ಬೆಳೆದುದು ಸ್ವಾತಂತ್ರ್ಯದ ವಾತಾವರಣದಲ್ಲಿ; ವ್ಯಕ್ತಿ ಸ್ವಾತಂತ್ರ್ಯವೂ ಸರ್ವಸಮದೃಷ್ಟಿಯಿಂದ ಕೂಡಿದ ಸದಸ್ಯ ಪ್ರಭುತ್ವವೂ ಸಹಕಾರ ಸಂಸ್ಥೆಯ ಅಡಿಗಲ್ಲು. ಈ ಅಸ್ತಿಭಾರದ ಮೇಲೆ ಅಂತರ್ರಾಷ್ಟ್ರೀಯ ಆರ್ಥಿಕ ಉದ್ಯಮಗಳನ್ನೂ ಅಂತರ್ರಾಷ್ಟ್ರೀಯ ಸೌಹಾರ್ದವನ್ನೂ ಸ್ಥಾಪಿಸಲು ಸಹಕಾರಿಗಳು ಸಾಹಸ ಪಡುತ್ತಿರುವರು. ಈ ಮೂಲತತ್ವಗಳಿಗೆ ವಿರುದ್ಧವಾಗಿ ಇತರ ಜನಾಂಗಗಳಲ್ಲಿ ದ್ವೇಷಾಸೂಯೆಗಳನ್ನು ಉದ್ರೇಕಿ

ಸುವ ಇಟಲಿ ಜರ್ಮನಿ ಸರ್ಕಾರಗಳ ಕೈಗೊಂಬೆಗಳಾದ ಸಂಸ್ಥೆಗಳು ನಿಜವಾದ ಸಹಕಾರ ಸಂಸ್ಥೆಗಳೆಂದು ಹೇಳಲಾಗುವುದಿಲ್ಲ.

ಪೌರಸ್ತ್ಯದೇಶಗಳಲ್ಲಿ ಸಹಕಾರ ಪದ್ಧತಿಯಲ್ಲಿ ಹೆಚ್ಚು ಅಭಿವೃದ್ಧಿಗೆ ಬಂದಿರುವುವು ಜಪಾ, ಚೀಣಾ ಮತ್ತು ಇಂಡಿಯಾ. ಜಪಾನ್‌ದೇಶದಲ್ಲಿ ಸಹಕಾರಪದ್ಧತಿಯು ೧೯೦೦ ರಲ್ಲಿ ಆರಂಭವಾಯಿತು. ಆ ದೇಶದ ಸಹಕಾರಪದ್ಧತಿಯ ಅಭಿವೃದ್ಧಿಯು ಬಹಳ ಆಶಾಜನಕವಾಗಿದೆ. ಅಲ್ಲಿ ಈಗ ಸುಮಾರು ೩೫,೦೦೦ ರೈತರ ಸಂಘಗಳಿವೆ. ಸದಸ್ಯರುಗಳ ಸಂಖ್ಯೆ ಮೈಸೂರು ದೇಶದ ಪ್ರಜಾಸಂಖ್ಯೆಯಷ್ಟಿದೆ. ಲೇವಾದೇವಿ ನಡೆಸತಕ್ಕ ಪತ್ತು ಸಂಘಗಳೇ ಹೆಚ್ಚು. ಇವುಗಳಲ್ಲದೆ ಪ್ರಜಾರೋಗ್ಯ, ವಿಮಾ, ಮತ್ತು ವಾಣಿಜ್ಯ ಸಂಘಗಳೂ ಕೆಲಸಮಾಡುತ್ತಿವೆ. ಆಗಾಗ್ಗೆ ದೇಶದಲ್ಲಿ ತಲೆದೋರುವ ಕ್ಷಾಮಗಳನ್ನು ಹತೋಟಿಯಲ್ಲಿಡಲು ಕೆಲಸ ಮಾಡುತ್ತಿರುವ ಕ್ಷಾಮ ನಿವಾರಣ ಸಂಘಗಳು ಅಲ್ಲಿನ ವಿಶೇಷ ಸಂಸ್ಥೆಗಳು. ಕ್ಷಾಮಕಾಲದಲ್ಲಿ ಜೀವನಕ್ಕಿಲ್ಲದೆ ರೈತರಿಗೆ ತೊಂದರೆಯಾದಾಗ ಈ ಕಷ್ಟ ನಿವಾರಣೆ ಮಾಡಿಕೊಳ್ಳಲು ತಕ್ಕ ಸಲಹೆಗಳನ್ನೂ ಸಹಾಯವನ್ನೂ ಕೊಡುವುದು ಈ ಸಂಘಗಳ ಉದ್ದೇಶ. ಇದಕ್ಕಾಗಿ ಸಸ್ಯಗಳನ್ನು ಬೆಳೆಯುವ ಪ್ರಯೋಗಶಾಲೆಗಳನ್ನೂ ಕುರಿ ಮೇಕೆಗಳನ್ನು ಸಾಕುವ ವಿಧಾನಗಳನ್ನು ಕಲಿಸುವ ಸಂಸ್ಥೆಗಳನ್ನೂ ಈ ಸಹಕಾರ ಸಂಘಗಳು ಏರ್ಪಡಿಸುತ್ತವೆ. ಜಪಾನಿನಲ್ಲಿಯೂ ನಮ್ಮದೇಶದಲ್ಲಿರುವಂತೆ ಸಹಕಾರ ಪದ್ಧತಿಯು ಸರ್ಕಾರದಿಂದ ಆರಂಭಿಸಲ್ಪಟ್ಟು ಇನ್ನೂ ಅದರ ಆಶ್ರಯದಲ್ಲೇ ಮುಂದುವರಿಯುತ್ತಿದೆ. ಪ್ರಜೆಗಳ ಸ್ವಸಾಮರ್ಥ್ಯದ ಅಡಿಗಲ್ಲಿನ ಮೇಲೆ ಅದು ಇನ್ನೂ ನಿಂತಿಲ್ಲ. ಇನ್ನುಮುಂದೆ ನಿಲ್ಲಬಹುದೆಂದು ನಿರೀಕ್ಷಿಸಬಹುದು.

ಚೀಣಾದೇಶದಲ್ಲಿ ಸಹಕಾರ ಪದ್ಧತಿಯು ೧೯೧೨ ರಲ್ಲಿ ಪ್ರಾರಂಭವಾಯಿತು. ಜಪಾನಿನ ಮತ್ತು ಭರತಖಂಡದ ಪ್ರಭಾವವೇ ಇದಕ್ಕೆ ಕಾರಣ. ಇಲ್ಲಿ ಲೇವಾದೇವಿ (ಪತ್ತು) ಸಂಘಗಳು ಬಹಳ ಪ್ರಾಶಸ್ತ್ಯಕ್ಕೆ ಬಂದಿವೆ. ಇವುಗಳನ್ನು ಬಿಟ್ಟರೆ ಪತ್ತು, ಮಾರಾಟ, ವಿಮಾ, ಈ ತರಹ ಬೇರೆಬೇರೆ ಹಲವು ಉದ್ದೇಶಗಳುಳ್ಳ (Multi-purpose) ಸಂಘಗಳು ಮುಖ್ಯವಾದುವು. ಈ ಸಂಘಗಳು ಹೆಜ್ಜೆಹೆಜ್ಜೆಗೂ ಸರ್ಕಾರದ ಸಹಾಯವನ್ನು ಬೇಡುತ್ತಿವೆ. ಇವುಗಳ ಆಡಳಿತವೂ ಅಷ್ಟು ಸಮರ್ಪಕವಾಗಿಲ್ಲ. ಸಹಕಾರ ತತ್ವಕ್ಕೆ ಅನುಗುಣವಾದ ಕಾರ್ಯರೀತಿ ಆ ದೇಶದಲ್ಲಿ ಇನ್ನೂ ಪ್ರಚಾರವಾಗಬೇಕಾಗಿದೆ.

ಯಹೂದ್ಯರು ಪ್ಯಾಲಸ್ಟೈನ್ ದೇಶಕ್ಕೆ ವಲಸೆಹೋಗಿ ನೆಲಸಿದಾಗಿನಿಂದ ಅವರ ಕಾರ್ಯಚಟುವಟಿಕೆಗಳ ಪರಿಣಾಮವಾಗಿ ಸಹಕಾರೋದ್ಯಮಗಳು ಅಲ್ಲಿ ಬಹಳ ಅಭಿವೃದ್ಧಿಗೆ ಬರುತ್ತಿವೆ. ಯಹೂದ್ಯರಲ್ಲಿ ಕೆಲವು ಮಂದಿ ಪ್ಯಾಲಸ್ಟೈನ್ ದೇಶದಲ್ಲಿ ವ್ಯವಸಾಯ ಕೈಕಸಬುಗಳನ್ನವಲಂಬಿಸಿ ನೆಲಸಿರುವರು. ಇವರ ಪ್ರಜಾಸಂಖ್ಯೆ ಸುಮಾರು ೫ ಲಕ್ಷ. ಇವರು ಸಹಕಾರ ಪದ್ಧತಿಯನ್ನು ಬಹು ಚತುರತೆಯಿಂದ ರೂಢಿಸಿಕೊಂಡು ಅತಿ ವೇಗವಾಗಿ ಮುಂದುವರಿಯುತ್ತಿರುವರು. ಯೂರೋಪು ದೇಶಗಳಲ್ಲಿ ಯಹೂದ್ಯರು ನಡೆಸುತ್ತಿರುವ ಸಹಕಾರ ಸಂಸ್ಥೆಗಳೆಲ್ಲವೂ ಲೇವಾದೇವಿ (ಪತ್ತು) ಸಂಘಗಳು. ಪ್ಯಾಲೆಸ್ಟೈನಿನಲ್ಲಾದರೋ ಲೇವಾದೇವಿ (ಪತ್ತು) ಸಂಘಗಳು ಶೇಕಡ ೨೦ಕ್ಕೂ ಕಡಮೆಯಾಗಿದ್ದು ಉಳಿದವುಗಳೆಲ್ಲಾ ಇತರ ವಿವಿಧ ಉದ್ಯಮಗಳನ್ನು ಕೈಗೊಂಡಿರುವುವು. ಈ ರೀತಿಯಾಗಿ ವ್ಯವಸಾಯ ಮತ್ತು ಕೈಗಾರಿಕೆಯ ಸಾಮಾನುಗಳ ತಯಾರಿಕೆ, ಮಾರಾಟ, ಯಾನ

ವಾಹನ ಸೌಕರ್ಯಗಳು ಎಲ್ಲವೂ ವ್ಯವಸ್ಥಿತವಾಗಿವೆ. ಇವುಗಳ ಲ್ಲದೆ ಮನೆಕಟ್ಟುವ ಸಂಘಗಳೂ ಕುಡಿಯುವ ನೀರನ್ನೊದಗಿಸುವ ಸಂಘಗಳೂ ಸ್ಥಾಪನೆಯಾಗಿವೆ. ನಿರಾಶ್ರಿತರಾಗಿ ಬಂದವರಿಗೆಲ್ಲಾ ಸಹಕಾರ ಸಂಘಗಳ ಮೂಲಕ ಸಹಾಯ ದೊರೆಯುತ್ತಿದೆ.

ಯಹೂದ್ಯರ ಈ ತೆರನಾದ ಸಹಕಾರ ಪ್ರಗತಿಯು ಎಲ್ಲ ರನ್ನೂ ವಿಸ್ಮಯಗೊಳಿಸತಕ್ಕದ್ದಾಗಿರುವುದು. ಇದಕ್ಕೆ ಆ ಜನದ ಸದ್ಗುಣಗಳೇ ಕಾರಣ. ಅವರಲ್ಲಿ ಶಿಸ್ತಿನ ಕಟ್ಟು ಬಲವಾ ಗಿದೆ. ಪರಸ್ಪರ ವಿಶ್ವಾಸ ಮತ್ತು ನಂಬಿಕೆ, ದೂರದರ್ಶಿತ್ವ, ವ್ಯವಹಾರದಕ್ಷತೆ, ಕಷ್ಟಸಹಿಷ್ಣುತೆ, ಸಹನೆ, ದೃಢಸಂಕಲ್ಪ ಇವೇ ಮುಂತಾದ ಸದ್ಗುಣಗಳು ಅವರ ರಕ್ತಗತವಾದುವು. ಸಹಕಾರ ಪದ್ಧತಿಯು ಇಂಥಾ ಜನರಲ್ಲಿ ಬೇರೂರಿ, ಹೊಮ್ಮಿ, ಊರ್ಜಿತವಾಗುವುದೇನಾಶ್ಚರ್ಯ. ಇವುಗಳೆಲ್ಲಕ್ಕೂ ಮಿಗಿಲಾಗಿ ಅವರ ಹೆಂಗಸರೂ ಮುಂದೆ ಬಂದು ದಕ್ಷತೆಯಿಂದ ಸಹಕಾರ ಕಾರ್ಯನಿರ್ವಾಹ ಮಾಡುತ್ತಿದ್ದಾರೆ. ಯಹೂದ್ಯರಲ್ಲಿ ಸಹ ಕಾರ ಪದ್ಧತಿಯು ಇಷ್ಟರ ಪ್ರಗತಿಗೆ ಬಂದಿರುವುದಕ್ಕೆ ಯಹೂದ್ಯ ಸ್ತ್ರೀಯರ ಸಾಹಸವೇ ಮುಖ್ಯ ಕಾರಣವೆಂದು ಹೇಳಲೂ ಬಹುದು.

---

# ೪. ಭರತಖಂಡದಲ್ಲೂ ಮೈಸೂರಿನಲ್ಲೂ ಅದು ಬೆಳೆದ ಬಗೆ

ಭರತಖಂಡದಲ್ಲಿ ಮುಕ್ಕಾಲು ಪಾಲು ಜನರಿಗೆ ವ್ಯವಸಾಯವೇ ಜೀವನಾಧಾರ. ನಮ್ಮ ವ್ಯವಸಾಯ ಪದ್ಧತಿಯು ಪ್ರಾಚೀನ ಸಂಪ್ರದಾಯದಲ್ಲೇ ನಡೆದು ಬರುತ್ತಿರುವುದು. ಇತರ ದೇಶಗಳಂತೆ ವಿಜ್ಞಾನ ಸಹಾಯದಿಂದ ಸುಧಾರಿಸಿದ ಪದ್ಧತಿಗಳು ಜನಸಾಮಾನ್ಯದಲ್ಲಿ ಹರಡಿಲ್ಲ. ಆದುದರಿಂದ ವ್ಯವಸಾಯದ ಉತ್ಪತ್ತಿಯೂ ರೈತನ ವರಮಾನವೂ ಇತರ ದೇಶಗಳಿಗಿಂತ ಬಹಳ ಕಡಮೆ. ಅದೂ ಅಲ್ಲದೆ ವ್ಯವಸಾಯವನ್ನೇ ನೆಚ್ಚಿಕೊಂಡಿರುವುದೂ ಒಂದು ಕಷ್ಟ. ಕಾಲಕ್ಕೆ ಸರಿಯಾಗಿ ಮಳೆ ಬಾರದಿದ್ದಲ್ಲಿ ಕ್ಷಾಮ ತಲೆದೋರಿ ವ್ಯವಸಾಯಗಾರರಿಗೆ ಜೀವನ ಸಾಗಿಸುವುದು ದುಸ್ತರವಾಗುತ್ತದೆ. ಇದರ ಮೇಲೆ ಸಮಾಜದ ಕಟ್ಟುಪಾಡುಗಳಿಗೆ ಒಳಗಾಗಿ, ದುಬಾರಿ ಖರ್ಚುಗಳನ್ನು ನಿಲ್ಲಿಸುವ ಹಾಗಿಲ್ಲ. ಸಾಮಾನ್ಯವಾಗಿ ರೈತರು ಅವಿದ್ಯಾವಂತರಾದುದರಿಂದ ಮಿತವ್ಯಯದ ಪದ್ಧತಿಯು ಅವರಿಗೆ ತಿಳಿಯದು. ತಿಳಿದರೂ ಕಾರ್ಯಾಚರಣೆಯಲ್ಲಿ ಸಾಧಿಸಲು ಅವಕಾಶವಿರುವುದಿಲ್ಲ. ಒಳ್ಳೆಯದಾಗಲಿ ಕೆಟ್ಟದ್ದಾಗಲಿ, ಎಲ್ಲವೂ ಕರ್ಮ ಫಲವೆಂಬೇ ಅವರ ನಿಶ್ಚಲವಾದ ನಂಬಿಕೆ. ವರಮಾನದ ಮಿತಿಯನ್ನು ಮೀರಿದ ಗೃಹಕೃತ್ಯದ ಖರ್ಚನ್ನು ಸರಿತೂಗಿಸಲು ಸಾಲಕ್ಕೆ ಕೈ ಒಡ್ಡುವರು. ತೀರಿಸಲು ಚೈತನ್ಯವಿಲ್ಲದೆ ಸಾಲವು ದಿನೇ ದಿನೇ ಏರುವುದು. ನಮ್ಮ ದೇಶದಲ್ಲಿ ವ್ಯವಸಾಯಗಾರರ ಸಾಲದ ಹೊರೆ ಎಷ್ಟಿರಬಹುದೆಂಬುದು ನಿಷ್ಕರ್ಷೆಮಾಡಿ ತಿಳಿಯುವುದು ಕಷ್ಟಸಾಧ್ಯ. ಆದರೂ ಕೆಲವು ಅಂದಾಜುಗಳ ಆಧಾರದ ಮೇಲೆ ಅರ್ಥಶಾಸ್ತ್ರಜ್ಞರು ದೇಶೀಯ ಸಂಸ್ಥಾನಗಳನ್ನು

ಬಿಟ್ಟು ಬ್ರಿಟಿಷ್ ಭಾರತದಲ್ಲಿ ಮಾತ್ರವೇ ರೈತರ ಸಾಲದ ಒಟ್ಟು ಹೊರೆಯು ಒಂದು ಸಾವಿರ ಕೋಟಿ ರೂಪಾಯಿಗಳಿಗೆ ಕಡಮೆ ಇಲ್ಲವೆಂದು ಲೆಕ್ಕಹಾಕಿರುವರು. ಕೆಲವು ವರ್ಷಗಳ ಹಿಂದೆ ಮದರಾಸು ಆಧಿಪತ್ಯದಲ್ಲಿ ನಡೆಸಿದ ಪರಿಶೋಧನೆಯಿಂದ ಆ ಪ್ರಾಂತ್ಯದಲ್ಲಿ ರೈತರ ಸಾಲವು ಇನ್ನೂರು ಕೋಟಿ ರೂಪಾಯಿ ಗಳಿಗೆ ಕಡಮೆ ಇಲ್ಲವೆಂದು ವರದಿಯಾಗಿದೆ. ಮೈಸೂರು ದೇಶ ದಲ್ಲಿ ರೈತರ ಸಾಲವು ಮೂವತ್ತೈದು ಕೋಟಿಗೆ ಕಡಮೆ ಇಲ್ಲ ವೆಂದು ಅಧಿಕಾರಯುತವಾಗಿ ಅಂದಾಜು ಮಾಡಿರುವರು.

ಈ ಸಾಲದ ಏರಿಕೆಗೆ ಹೀನಾಯವಾದ ಬಡ್ಡಿಯ ದರವೂ, ಅಸ ಲಿನ ಜೊತೆಯಲ್ಲಿ ಬಡ್ಡಿಯನ್ನು ಕೂಡಿಸಿ ಸಾಲದ ಮೊತ್ತವನ್ನು ಏರಿಸುವ ಪದ್ಧತಿಯೂ ಕಾರಣವೆನ್ನಬಹುದು. ಆದರೆ ಮುಖ್ಯ ಕಾರಣ ರೈತನ ವರಮಾನ ಕಡಮೆಯಾಗಿರುವುದು. ಇತರ ದೇಶಗಳೊಂದಿಗೆ ಹೋಲಿಸಿದರೆ ಭಾರತೀಯರ ವರಮಾನವು (ಸರ್ ಎಂ. ವಿಶ್ವೇಶ್ವರಯ್ಯನವರ ಗಣನೆಯ ಪ್ರಕಾರ) ಈ ರೀತಿ ಇರುವುದು—

| ದೇಶಗಳು | ಪ್ರತಿ ವ್ಯಕ್ತಿಯ ಸರಾಸರಿ ವಾರ್ಷಿಕ ವರಮಾನ ರೂ. |
|---|---|
| ೧. ಅಮೆರಿಕಾ ಸಂಯುಕ್ತ ಸಂಸ್ಥಾನಗಳು | ೨೦೫೩ |
| ೨. ಕೆನಡಾದೇಶ | ೧೨೬೮ |
| ೩. ಗ್ರೇಟ್‌ಬ್ರಿಟನ್ ಮತ್ತು ಐರ್ಲೆಂಡು | ೧೦೯೨ |
| ೪. ಫ್ರಾನ್ಸ್ | ೬೩೬ |
| ೫. ಜಪಾನ್ | ೨೭೧ |
| ೬. ಭರತಖಂಡ | ೮೨ |

ಈ ಶೋಚನೀಯ ಪರಿಸ್ಥಿತಿಯನ್ನು ಉತ್ತಮಪಡಿಸಲು ಕೈಕೊಳ್ಳಬೇಕಾದ ಪ್ರಯತ್ನಗಳು ಎರಡು ವಿಧವಾಗಿವೆ. ಮೊದಲನೆಯದು ವರಮಾನವನ್ನು ಹೆಚ್ಚಿಸಲು ಪ್ರಯತ್ನಮಾಡುವುದು. ಎರಡನೆಯದು, ದುಂದುಖರ್ಚನ್ನು ನಿಲ್ಲಿಸಿ ಅತ್ಯಾವಶ್ಯಕವಾದ ಉದ್ಯಮಗಳಿಗೆ ಸುಲಭದರದ ಬಡ್ಡಿಯಮೇಲೆ ಬಂಡವಾಳವನ್ನೊದಗಿಸುವುದು. ಇವುಗಳನ್ನು ಕಾರ್ಯರೂಪಕ್ಕೆ ತರುವ ಉದ್ದೇಶದಿಂದಲೇ ಸಹಕಾರಪದ್ಧತಿಯು ನಮ್ಮ ದೇಶದಲ್ಲಿ ಆರಂಭವಾದುದು.

ಪ್ರಾಚೀನಕಾಲದಿಂದಲೂ ನಮ್ಮ ದೇಶದಲ್ಲಿ ಸಾಮಾಜಿಕ ಕೆಲಸಕಾರ್ಯಗಳಲ್ಲೆಲ್ಲಾ ಗ್ರಾಮಸ್ಥರೆಲ್ಲರೂ ಒಟ್ಟಿಗೆ ಕಲೆತು ಮಾಡುವುದೂ, ಗೃಹಕೃತ್ಯದ ಕೆಲಸಕಾರ್ಯಗಳಲ್ಲಿ ನಂಟರಿಷ್ಟರು ಮತ್ತು ನೆರೆಹೊರೆಯವರು ಸಹಕರಿಸುವುದೂ ವಾಡಿಕೆಯಲ್ಲಿವೆ. ಈ ರೀತಿಯ ಸಾಮೂಹಿಕ ಕೆಲಸಕಾರ್ಯಗಳು ಸುಸೂತ್ರವಾಗಿ ನಡೆಯುತ್ತಿದ್ದುವೆಂಬುದಕ್ಕೆ ವೇದಗಳಲ್ಲೂ ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ಸಾಕಾದಷ್ಟು ಆಧಾರಗಳಿವೆ. ಭರತಖಂಡದ ನಾನಾಭಾಗಗಳಲ್ಲಿ ಬೇರೆ ಬೇರೆಯ ಕಸಬಿನವರು ತಮಗೆ ಬೇಕಾದ ಬಂಡವಾಳವನ್ನು ಸಾಮೂಹಿಕವಾಗಿ ಕೂಡಿಸುವ ಪದ್ಧತಿಯೂ ಇತ್ತು. ಅವುಗಳಲ್ಲಿ ಕೆಲವು ಈಗಲೂ ನಡೆದುಬಂದಿವೆ. ಅವುಗಳಲ್ಲೆಲ್ಲಾ ಮುಖ್ಯವಾದುದು ಮದರಾಸು ಆಧಿಪತ್ಯದಲ್ಲಿ ಹರಡಿದ್ದ ನಿಧಿ ಎಂಬ ಹೆಸರಿನ ಸಂಸ್ಥೆಗಳು. ಇವು "ಚೀಟಿಕಟ್ಟು" ಎಂಬ ಪದ್ಧತಿಯನ್ನನುಸರಿಸಿ ಜನರಿಗೆ ಬಂಡವಾಳವನ್ನೊದಗಿಸುತಿದ್ದುವು. ಇವು ಪರಸ್ಪರ ಸಹಾಯದ ಆಧಾರದಮೇಲೆ ಬೆಳೆದುಬಂದುವು. ಇವುಗಳನ್ನು ಅನುಸರಿಸಿ ಪಂಜಾಬಿನಲ್ಲಿಯೂ ಸಂಯುಕ್ತ ಪ್ರಾಂತ

ದಲ್ಲಿಯೂ ಈ ಮಾದರಿಯ ಸಂಸ್ಥೆಗಳು ಹರಡಿದುವು. ಇವಲ್ಲದೆ ಪಂಜಾಬಿನಲ್ಲಿ ೧೮೯೧ ರಲ್ಲಿ ಸ್ವತಂತ್ರವಾದ ಒಂದು ಸಹಕಾರ ಸಂಸ್ಥೆಯು ಆರಂಭವಾಗಿ ಕೆಲವು ವರ್ಷ ಕೆಲಸಮಾಡಿತು. ೧೮೯೪ ರಲ್ಲಿ ನಮ್ಮ ಸಂಸ್ಥಾನದಲ್ಲಿಯೂ ವ್ಯವಸಾಯದ ಬ್ಯಾಂಕುಗಳು ಸರಕಾರದವರಿಂದ ಸ್ಥಾಪಿಸಲ್ಪಟ್ಟು ಕೆಲವು ವರ್ಷ ಕೆಲಸ ನಡೆಸಿದುವು. ಇತರ ಪ್ರಾಂತ್ಯಗಳಲ್ಲೂ ಅಲ್ಲೊಂದು ಇಲ್ಲೊಂದು ಸಹಕಾರ ಸಂಸ್ಥೆಗಳು ಹುಟ್ಟಿಕೊಂಡುವು. ಆದರೆ ಈ ಉದ್ಯಮಗಳೊಂದೂ ಊರ್ಜಿತವಾಗಲಿಲ್ಲ.

ವ್ಯವಸಾಯಗಾರರಿಗೆ ಬಂಡವಾಳವನ್ನೊದಗಿಸುವ ಪ್ರಥಮ ಪ್ರಯತ್ನವು ೧೮೮೩ ರಲ್ಲಿ ಮಹಾರಾಷ್ಟ್ರದಲ್ಲಿ ನಡೆಯಿತು. ಸರ್ ವಿಲಿಯಂ ವೆಡರ್‌ಬರ್ನ್, ಮಹಾದೇವ್ ಗೋವಿಂದ ರಾನಡೆ ಈ ಇಬ್ಬರು ನ್ಯಾಯಾಧೀಶರೂ ತಾವು ರಚಿಸಿದ ಯೋಜನೆಯೊಂದರ ವಿವರಗಳನ್ನು ಸರ್ಕಾರಕ್ಕೆ ಕಳುಹಿಸಿಕೊಟ್ಟರು. ಇವರ ಸಲಹೆಗಳನ್ನು ಸರ್ಕಾರದವರು ಒಪ್ಪಲಿಲ್ಲ. ಅನಂತರ ಸರ್ಕಾರದವರೇ ತಕಾವಿ ಸಾಲಗಳ ಮೂಲಕ ರೈತರಿಗೆ ಸಹಾಯವನ್ನೊದಗಿಸುವ ಕಾರ್ಯವನ್ನು ಕೈಕೊಂಡರು. ಈ ಏರ್ಪಾಟು ಭರತಖಂಡದಲ್ಲೆಲ್ಲಾ ಈಗಲೂ ಆಚರಣೆಯಲ್ಲಿರುವುದು. ಐವತ್ತು ಅರುವತ್ತು ವರ್ಷಗಳಿಂದಲೂ ನಡೆದುಬಂದರೂ ನಾನಾ ಕಾರಣಗಳಿಂದ ಈ ವ್ಯವಸ್ಥೆ ಜನಾದರಣೀಯವಾಗಿಲ್ಲ; ಇದರಿಂದ ರೈತರಲ್ಲಿ ಹೆಚ್ಚು ಮಂದಿಗೆ ಪ್ರಯೋಜನವೂ ಆಗಿಲ್ಲ. ಅಲ್ಲದೆ ಇದರ ಮುಖ್ಯೋದ್ದೇಶವಾದ ವ್ಯವಸಾಯಾಭಿವೃದ್ಧಿಯೂ ನೆರವೇರಲಿಲ್ಲ.

ಈ ಯೋಜನೆಯು ಫಲಕಾರಿಯಾಗದೆ ಇದ್ದುದರಿಂದ ವ್ಯವಸಾಯಗಾರರಿಗೆ ಬಂಡವಾಳವನ್ನೊದಗಿಸಲು ಬೇರೆ ಮಾರ್ಗ

ಗಳನ್ನು ಹುಡುಕಲು ಯೋಚನೆಗಳಾರಂಭವಾದುವು. ಮದರಾಸು ಸರ್ಕಾರದವರು ೧೮೯೨ ರಲ್ಲಿ ವ್ಯವಸಾಯ ಬ್ಯಾಂಕುಗಳನ್ನು ಸ್ಥಾಪಿಸುವುದು ಸಾಧ್ಯವೇ ಇಲ್ಲವೇ, ಅದಕ್ಕೆ ಸಾಧಕಗಳೇನು ಬಾಧಕಗಳೇನು ಎಂಬುದನ್ನು ಪರಿಶೀಲಿಸಲು ಫ್ರೆಡ್ರಿಕ್ ನಿಕಲ್‌ಸರ್ ಎಂಬ ಅಧಿಕಾರಿಯನ್ನು ನೇಮಿಸಿದರು. ಆತನು ಮದ್ರಾಸು ಪ್ರಾಂತದಲ್ಲಿ ಹಿಂದಿನಿಂದ ನಡೆದು ಬಂದಿದ್ದ "ನಿಧಿ" ಸಂಸ್ಥೆಗಳ ರಚನೆ ಮತ್ತು ಕಾರ್ಯಕ್ರಮಗಳನ್ನೂ ಪಾಶ್ಚಾತ್ಯ ದೇಶಗಳಲ್ಲಿ ವ್ಯವಸಾಯಗಾರರಿಗೆ ಬಂಡವಾಳವನ್ನು ಒದಗಿಸಲು ಏರ್ಪಟ್ಟ ವ್ಯವಸ್ಥೆಯನ್ನೂ ಬಹುಶ್ರದ್ಧೆಯಿಂದ ಕೂಲಂಕಷವಾಗಿ ಪರಿಶೀಲಿಸಿ ಭಾರತೀಯರ ಸ್ಥಿತಿಗತಿಗಳಿಗನುಗುಣವಾದ ಸಲಹೆಗಳನ್ನೊಳಕೊಂಡ ತನ್ನ ವರದಿಯನ್ನು ಸರ್ಕಾರಕ್ಕೆ ಒಪ್ಪಿಸಿದನು. ಈ ವರದಿಯಲ್ಲಿ ಅತ್ಯುಪಯುಕ್ತವಾದ ವಿಷಯಗಳು ಸಂಗ್ರಹವಾಗಿವೆ; ರೈತಾಪಿ ಜನರ ಜೀವನ ಪರಿಶ್ರಮ ಚೆನ್ನಾಗಿದೆ; ಸಲಹೆಗಳೂ ಕೂಡ ವಿವೇಕ ಪೂರ್ಣವಾಗಿವೆ. ರೈತರ ಏಳಿಗೆಗೆ ಸಹಕಾರ ಪದ್ಧತಿಯನ್ನನುಸರಿಸಬೇಕೆಂಬುದೇ ಈ ವರದಿಯ ಮುಖ್ಯ ಸಲಹೆ.

ಇದೇ ಸಮಯದಲ್ಲಿ ಸಂಯುಕ್ತಪ್ರಾಂತದ ಅಧಿಕಾರಿಯಾಗಿದ್ದ ದೂಪರ್ನೆ ಎಂಬ ಜಿಲ್ಲಾಧಿಕಾರಿಯು ತನ್ನ ಅಧಿಕಾರಕ್ಕೆ ಒಳಪಟ್ಟ ಜಿಲ್ಲೆಯ ರೈತರ ಸ್ಥಿತಿಗತಿಗಳನ್ನುಉತ್ತಮ ಪಡಿಸಲು ತನ್ನಸ್ವಂತ ಜವಾಬ್ದಾರಿಯ ಮೇಲೆ ಕೆಲವು ಕಾರ್ಯಗಳನ್ನು ಕೈಕೊಂಡನು. ಇವುಗಳಲ್ಲಿ ರೈತರಿಗೆ ಬಂಡವಾಳವನ್ನೊದಗಿಸುವ ಬ್ಯಾಂಕುಗಳ ವ್ಯವಸ್ಥೆ ಒಂದು. ಈ ತರಹ ಬ್ಯಾಂಕುಗಳು ಆವನ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ಚೆನ್ನಾಗಿ ಕೆಲಸಮಾಡುತ್ತಿದ್ದುವು. ಸರ್ಕಾರದ ಪ್ರೇರಣೆಯಾಗಲಿ ಬೆಂಬಲವಾಗಲಿ ಇಲ್ಲದೆ ಖಾಸಗಿಯಾಗಿಯೇ

ಈರೀತಿ ಕೆಲಸವನ್ನು ಕೈಕೊಂಡು ನಡೆಸಿದುದು ದೂಪರ್ನೆಯ ಸಾಹಸ. ತಾನು ನಡೆಸಿದ ಪ್ರಯೋಗಗಳನ್ನು ಕುರಿತು ಒಂದು ವರದಿಯನ್ನು ಪ್ರಕಟಿಸಿದನು. ನಿಕಲ್‌ಸನ್ ವರದಿಯೂ ದೂಪರ್ನೆಯ ವರದಿಯೂ—ಎರಡೂ ಇಂಡಿಯಾ ಸರ್ಕಾರದ ಗಮನಕ್ಕೆ ಬಂದುವು. ಇವುಗಳನ್ನು ಪರಿಶೀಲಿಸಲು ಇಂಡಿಯಾ ಸರ್ಕಾರದವರು ೧೯೦೦ರಲ್ಲಿ ಕಲ್ಕತ್ತೆಯಲ್ಲಿ ಒಂದು ಸಭೆ ಸೇರಿಸಿದರು. ಈ ಸಭೆಯ ನಿರ್ಧಾರದಂತೆ ಇಂಡಿಯಾ ಸರ್ಕಾರದವರು ವ್ಯವಸಾಯಗಾರರ ಬದುಕನ್ನೂ ಬಾಳನ್ನೂ ಉತ್ತಮಪಡಿಸಲು ರೈಫೀಸೆನ್ ಮಾದರಿಯ ಲೇವಾದೇವಿ (ಪತ್ತು) ಸಹಕಾರ ಸಂಘಗಳನ್ನು ಸ್ಥಾಪಿಸಲು ನಿಶ್ಚಯಿಸಿದರು. ಇದನ್ನು ಕಾರ್ಯರೂಪಕ್ಕೆ ತರಲು ಬೇಕಾದ ಕಾನೂನು ೧೯೦೪ ರಲ್ಲಿ ಆಚರಣೆಗೆ ಬಂತು.

ಈ ಕಾನೂನಿಗನುಸಾರವಾಗಿ ಸರ್ಕಾರದವರು ಪ್ರತಿಯೊಂದು ಪ್ರಾಂತದಲ್ಲೂ ಸಹಕಾರ ಸಂಘಗಳ ರಿಜಿಸ್ಟ್ರಾರರೆಂಬ ಅಧಿಕಾರಿಗಳನ್ನು ನೇಮಿಸಿದರು. ಅವರ ಮೂಲಕ ಮತ್ತು ಅವರ ಮೇಲ್ವಿಚಾರಣೆಗೆ ಒಳಪಟ್ಟಂತೆ ಸಹಕಾರ ಸಂಘಗಳ ಸ್ಥಾಪನೆಗೆ ಅವಕಾಶವಾಯಿತು. ಅಲ್ಲದೆ ಹೊಸದಾಗಿ ಸ್ಥಾಪಿಸಲ್ಪಟ್ಟ ಸಂಘಗಳಿಗೆ ಸ್ಟಾಂಪು ಮತ್ತು ಕೋರ್ಟು ಫೀ, ರಿಜಿಸ್ಟ್ರೇಷನ್ ರುಸುಮು, ಇವೇ ಮುಂತಾದ ಖರ್ಚುಗಳಿಲ್ಲದೆ ವ್ಯವಹಾರ ನಡೆಸುವ ರಿಯಾಯಿತಿಗಳನ್ನು ಒದಗಿಸಿಕೊಟ್ಟರು. ಇವುಗಳ ಜೊತೆಗೆ ಸಹಕಾರ ಪ್ರಚಾರ ಮತ್ತು ಶಿಕ್ಷಣ, ಸಹಕಾರ ಸಂಘಗಳ ಮೇಲ್ವಿಚಾರಣೆ, ಲೆಕ್ಕಪರಿಶೋಧನೆ, ಇವೇ ಮೊದಲಾದ ಜವಾಬ್ದಾರಿಯ ಭಾರವನ್ನೆಲ್ಲಾ ಸರ್ಕಾರದವರೇ ವಹಿಸಿಕೊಂಡರು.

೧೯೦೪ನೆಯ ಕಾನೂನಿನಲ್ಲಿ ಒಂದೆರಡು ನ್ಯೂನತೆಗಳು

ಕಂಡುಬಂದುವು. ಈ ಕಾನೂನಿಗನುಸಾರವಾಗಿ ಲೇವಾದೇವಿ ಸಂಘಗಳ ಸ್ಥಾಪನೆ ಮಾತ್ರ ಸಾಧ್ಯವಾಯಿತು. ಮಾರಾಟದ ಸಹಕಾರ ಸಂಘಗಳು, ವಿಮಾ ಸಹಕಾರ ಸಂಘಗಳು, ಸಹಕಾರಿ ಉಗ್ರಾಣಗಳು—ಇಂಥಾ ಸಂಸ್ಥೆಗಳ ಸ್ಥಾಪನೆಗೆ ಅವಕಾಶವಿರಲಿಲ್ಲ. ಸಂಘಗಳ ಅಭಿವೃದ್ಧಿಗೆ ಅಗತ್ಯವಾಗಿ ಬೇಕಾದ ಕೇಂದ್ರ ಸಂಸ್ಥೆಗಳ ರಚನೆ ಮತ್ತು ನಿರ್ವಾಹಕ್ಕೆ ಕಾನೂನಿನಲ್ಲಿ ಅವಕಾಶವಿಲ್ಲದಿದ್ದುದು ಇದರ ಇನ್ನೊಂದು ಲೋಪ. ಇವೆರಡು ನ್ಯೂನತೆಗಳನ್ನೂ ೧೯೧೨ನೆಯ ಇಸವಿಯಲ್ಲಿ ತಿದ್ದುಪಡಿಯಾದ ಸಹಕಾರದ ಕಾನೂನು ಹೋಗಲಾಡಿಸಿತು. ಅಲ್ಲಿಂದೀಚೆಗೆ ವಿವಿಧ ಸಹಕಾರ ಉದ್ಯಮಗಳು ಬೆಳೆಯಲು ಸಾಧ್ಯವಾಗಿದೆ.

೧೯೧೯ರ ವರೆಗೂ ಈ ಕಾನೂನಿಗೆ ಒಳಪಟ್ಟಂತೆ ಸಹಕಾರ ಸಂಸ್ಥೆಗಳ ಆಡಳಿತವೆಲ್ಲವೂ ಕೇಂದ್ರ ಸರ್ಕಾರದ ಹತೋಟಿಯಲ್ಲೇ ಇದ್ದಿತು. ಅಲ್ಲಿಂದೀಚೆಗೆ, ರಾಜಕೀಯ ಸುಧಾರಣೆಗಳ ಪರಿಣಾಮವಾಗಿ, ಸಹಕಾರ ಸಂಸ್ಥೆಗಳ ಆಡಳಿತವು ಪ್ರಾಂತ ಸರ್ಕಾರಗಳಿಗೆ ವರ್ಗಾಯಿಸಲ್ಪಟ್ಟಿತು. ಕೆಲವು ಪ್ರಾಂತ ಸರ್ಕಾರಗಳು ಇಂಡಿಯಾ ಸರ್ಕಾರದ ಕಾನೂನಿನಲ್ಲಿ ತಮ್ಮ ಪ್ರಾಂತದ ಸ್ಥಿತಿಗತಿಗಳಿಗನುಗುಣವಾಗಿ ಅತ್ಯಾವಶ್ಯಕವಾದ ಕೆಲವು ಬದಲಾವಣೆಗಳನ್ನು ಮಾಡಿಕೊಂಡು ಹೊಸ ಕಾನೂನುಗಳನ್ನು ರಚಿಸಿಕೊಂಡಿವೆ. ಪ್ರಾಂತ ಸರ್ಕಾರಗಳು ಸಹಕಾರದ ವಿಚಾರದಲ್ಲಿ ಬಹಳ ಆಸಕ್ತಿ ಹೊಂದಿವೆಯಾದುದರಿಂದ ಸಹಕಾರ ಪರಿಸ್ಥಿತಿಯು ಬಹಳ ಚುರುಕಾಗಿ ಮುಂದುವರಿಯುತ್ತಿವೆ. ಆಗಿಂದಾಗ್ಗೆ ಪ್ರಾಂತ ಸರ್ಕಾರದವರು ಸಹಕಾರಪದ್ಧತಿಯ ಪ್ರಗತಿಯನ್ನು ವಿಮರ್ಶಿಸಿ ಅದನ್ನು ಸುಧಾರಿಸುವ ಉದ್ದೇಶದಿಂದ ಪರಿಶೀಲನಾ ಸಮಿತಿಗಳನ್ನೇರ್ಪಡಿಸುತ್ತಿದ್ದಾರೆ; ಆಗಿಂದಾಗ್ಗೆ

ನಿಪುಣರ ಸಲಹೆಗಳನ್ನು ಪಡೆಯುತ್ತಿದ್ದಾರೆ; ಪ್ರಗತಿನಾಯಕ ವಾದ ಸಲಹೆಗಳನೇಕವನ್ನು ಕಾರ್ಯರೂಪಕ್ಕೆ ತರಲು ನೆರವಾಗಿದ್ದಾರೆ.

ಸಹಕಾರ ಪದ್ಧತಿಯು ನಮ್ಮ ದೇಶದಲ್ಲಿ ಹುಟ್ಟಿ ಬೆಳೆದು ಬಲಗೊಂಡಿರುವುದು ಸರ್ಕಾರದ ಬೆಂಬಲದಿಂದಲೇ. ಇದರ ಬೆಳವಣಿಗೆಯಲ್ಲಿ ಸರ್ಕಾರವೇ ಮುಖ್ಯ ಪಾತ್ರವನ್ನು ವಹಿಸಿರುವುದು. ಇತರ ದೇಶಗಳಲ್ಲೂ ಆಯಾ ಸರ್ಕಾರಗಳು ಸಹಕಾರ ಪದ್ಧತಿಯ ಬೆಳವಣಿಗೆಗೆ ನಾನಾ ರೂಪದಲ್ಲಿ ಸಹಾಯ ಸಂಪತ್ತುಗಳನ್ನೊದಗಿಸಿರುವುವು. ಆದರೆ ಭರತಖಂಡದಲ್ಲಿ ಸಹಕಾರಕ್ಕೆ ಸರ್ಕಾರದಿಂದ ದೊರೆಯುತ್ತಿರುವಷ್ಟು ಬೆಂಬಲ ಬೇರೆ ಯಾವ ದೇಶದಲ್ಲೂ ದೊರೆತಿಲ್ಲ. ಇಲ್ಲಿ ಸಹಕಾರ ಪದ್ಧತಿಯು ಸ್ವತಂತ್ರವಾಗಿ ಜನರ ಮುಂದಾಳುತನದಲ್ಲಿ ಬೆಳೆಯದೆ ಸರ್ಕಾರದ ಪಾಲನೆಗೆ ಒಳಪಟ್ಟು ಸರ್ಕಾರದ ಪ್ರೋತ್ಸಾಹದಿಂದ ಜನಗಳಲ್ಲಿ ಆಚರಣೆಗೆ ಬಂದಿದೆ. ಸಹಕಾರದಿಂದ ಪ್ರಜೆಗಳ ಆರ್ಥಿಕ ಮತ್ತು ನೈತಿಕ ಜೀವನವು ಉತ್ತಮಗೊಳ್ಳುವುದೆಂಬ ದೃಢವಾದ ನಂಬಿಕೆ ಇದ್ದುದರಿಂದಲೇ ಸರ್ಕಾರದವರು ಇದನ್ನು ದೇಶದ ಆದ್ಯಂತವೂ ಪ್ರಚಾರ ಮಾಡುವ ಕೆಲಸವನ್ನು ಕೈಕೊಂಡರು. ಇದರಿಂದ ಪ್ರತಿಫಲವೂ ಹೇರಳವಾಗಿ ದೊರಕಿದೆ. ಆದಾಗ್ಯೂ ಪ್ರಜೆಗಳ ಸ್ವಸಾಮರ್ಥ್ಯದಿಂದಲೇ ಬೆಳೆದ ಪದ್ಧತಿಗೂ ಸರ್ಕಾರದ ಪ್ರಯತ್ನದಿಂದಲೇ ಬಳಕೆಗೆ ಬಂದ ಪದ್ಧತಿಗೂ ವ್ಯತ್ಯಾಸವಿದ್ದೇ ಇದೆ. ಸರ್ಕಾರವೂ ಸಹ ಕಾಲಕ್ರಮದಲ್ಲಿ ಸಹಕಾರ ಪದ್ಧತಿಯು ಸಂಪೂರ್ಣವಾಗಿ ಖಾಸಗೀ ಆಡಳಿತಕ್ಕೆ ಒಳಪಡಬೇಕೆಂಬ ಘನ ಉದ್ದೇಶವನ್ನು ಹೊಂದಿರುವುದು. ಇದನ್ನು ಅಧಿಕಾರಿಗಳು ಆಗಿಂದಾಗ್ಗೆ ಹೇಳುತ್ತಲೇ ಇರುವರು. ಉತ್ಸಾಹ

ದಿಂದ ಮುಂದೆ ಬಂದು ಪ್ರಾಮಾಣಿಕವಾದ ಸೇವೆ ಸಲ್ಲಿಸುವ ಖಾಸಗಿ ಜನರು ಬಹಳ ವಿರಳ. ರೈತರ ಪ್ರಗತಿಸಾಧನೆಗೆ ಪ್ರತಿಯೊಂದು ಹಳ್ಳಿಯಲ್ಲೂ ರೈಫೀಸೆನ್ನಿನಂತೆ ಮಾರ್ಗದರ್ಶಕರು ಒಬ್ಬೊಬ್ಬರು ಇರುವುದು ಅತ್ಯಾವಶ್ಯಕ. ಇದನ್ನರಿತೇ ಸರ್ ಫ್ರೆಡ್ರಿಕ್ ನಿಕಲ್‌ಸನ್ನನು ತನ್ನ ಅಮೂಲ್ಯವಾದ ವರದಿಯಲ್ಲಿ "ಪ್ರತಿಯೊಂದು ಗ್ರಾಮದಲ್ಲೂ ರೈಫೀಸೆನ್ನಿನಂತೆಯೆ ದುಡಿದು ಕೆಲಸ ಸಾಧಿಸತಕ್ಕ ಮಹನೀಯನನ್ನು ಪತ್ತೆಮಾಡುವುದೇ ಸಹಕಾರಪದ್ಧತಿಯ ಏಳಿಗೆಗೂ ರೈತನ ಜೀವನೋದ್ಧಾರಕ್ಕೂ ಮೂಲ ಸಾಧನ" ಎಂದು ಸಾರಿದುದು. ಇದರ ಆಧಾರದ ಮೇಲೆಯೇ ಗ್ರಾಮಾಂತರಗಳಲ್ಲಿ ಅನಿಯಮಿತ ಜವಾಬ್ದಾರಿಯುಳ್ಳ ರೈಫೀಸೆನ್ ಸಂಘಗಳು ಏರ್ಪಟ್ಟಿವೆ. ಆದರೆ ಈ ತರಹ ಸಂಘಗಳಿಂದ ನಿರೀಕ್ಷಿಸಿದಷ್ಟು ಫಲ ದೊರೆಯದೆ ಸಹಕಾರ ಪ್ರೇಮಿಗಳಿಗೆ ನಿರುತ್ಸಾಹ ಉಂಟಾಗಿದೆ. ಸಂಘಗಳ ರಚನೆಗಳಲ್ಲಿ ರೈಫೀಸೆನ್ ಮಾದರಿಯೇ ತಪ್ಪಿರಬಹುದೆಂಬ ಶಂಕೆಯೂ ಈಚೆಗೆ ಕೆಲವರಲ್ಲಿ ತಲೆದೋರಿದೆ. ಗ್ರಾಮಾಂತರದಲ್ಲಿ ದಕ್ಷತೆಯಿಂದ ಕಾರ್ಯನಿರ್ವಾಹ ನಡೆಸತಕ್ಕ ನಿಃಸ್ವಾರ್ಥರಾದ ಖಾಸಗಿ ಜನರಿಲ್ಲದಿರುವಾಗ ಅನಕ್ಷರಸ್ಥರೂ ಅವಿದ್ಯಾವಂತರೂ ಆದ ನಮ್ಮ ರೈತರ ಮೇಲೆ ಅನಿಯಮಿತ ಜವಾಬ್ದಾರಿಯ ಹೊರೆಯನ್ನು ಹೊರಿಸಿರುವುದು ತಪ್ಪೆಂದು ಕೆಲವರು ಅಭಿಪ್ರಾಯ ಪಟ್ಟು ತಕ್ಕ ಬದಲಾವಣೆಗಳನ್ನು ಮಾಡಲು ಉದ್ಯುಕ್ತರಾಗಿರುವರು. ಮದರಾಸಿನಲ್ಲಂತೂ ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಅತಿ ತೀವ್ರವಾಗಿವೆ.

ಭಿನ್ನಾಭಿಪ್ರಾಯಗಳು ತುಂಬು ಜೀವನದ ಗುರುತು. ಪ್ರಗತಿಯುತವಾದ ಯಾವುದೊಂದು ಜೀವನದಲ್ಲೂ ಭಿನ್ನಾಭಿಪ್ರಾಯ

ಗಳು ಕಂಡುಬರುವುದು ಸಹಜ. ಇವುಗಳಿಂದ ಸಹಕಾರಪದ್ಧತಿಯ ಬೆಳವಣಿಗೆಗೆ ಮತ್ತಿಷ್ಟು ಉತ್ತೇಜನ ದೊರೆಯುವುದು; ವಿವಿಧ ಪ್ರಯೋಗಗಳನ್ನು ನಡೆಸಲವಕಾಶದೊರೆಯುವುದು. ಈಗಾಗಲೇ ಭರತಖಂಡದ ಆದ್ಯಂತದಲ್ಲೂ ಸಹಕಾರಪದ್ಧತಿಗೆ ಬಹುಮಟ್ಟಿನ ಪ್ರಾಶಸ್ತ್ಯ ದೊರೆತಿದೆ. ಇದೇ ನಮ್ಮ ಏಳಿಗೆಗೆ ಸಲೀಸಾದ ಮಾರ್ಗವೆಂದು ಎಲ್ಲರಿಗೂ ಮನದಟ್ಟಾಗಿದೆ. ಬಡ ಬೋರೇಗೌಡನನ್ನು ಋಣಮುಕ್ತನನ್ನಾಗಿ ಮಾಡಲು ಇದೊಂದೇ ಮಾರ್ಗವೆಂದು ಹಲವರ ದೃಢನಂಬಿಕೆ. ಎಲ್ಲೆಲ್ಲೂ ಸಹಕಾರ ಸಂಘಗಳು ಬೆಳೆದಿವೆ, ಇನ್ನೂ ಬೆಳೆಯುತ್ತಿವೆ. ಈ ಸಂಘಗಳ ಉದ್ದೇಶಗಳು ವಿಧವಿಧವಾಗಿವೆ. ಆದರೆ ಅತಿಶಯವಾಗಿ ಬೆಳೆದಿರುವುವು ಲೇವಾದೇವಿ (ಪತ್ತು) ಸಂಘಗಳು. ಚೀಣಾ, ಜಪಾನ್ ದೇಶಗಳಂತೆಯೇ ಭರತಖಂಡವೂ ಸಹ ಈ ಮಾದರಿ ಸಂಘಗಳನ್ನು ಹೆಚ್ಚು ಆಸಕ್ತಿ ಮತ್ತು ಶ್ರದ್ಧೆಯಿಂದ ಬೆಳಸಿದೆ.

ಆರ್ಥಿಕ ಸುಧಾರಣೆಯಲ್ಲಿ ಸುವ್ಯವಸ್ಥಿತವಾದ ಪತ್ತು ಮೊದಲನೆಯ ಹಂತ. ಇದರ ಅಭಾವವೇ ಭಾರತೀಯರ ಆರ್ಥಿಕ ದುಃಸ್ಥಿತಿಗೆ ಮುಖ್ಯಕಾರಣ. ವ್ಯವಸಾಯಗಾರರಿಗೆ ಸರಿಯಾದ ರೀತಿಯಲ್ಲಿ ಸಾಕಾದಷ್ಟು ಬಂಡವಾಳವನ್ನೊದಗಿಸುವುದೇ ಅವರ ಬದುಕನ್ನು ಉತ್ತಮಪಡಿಸುವ ಮೂಲ ಸುಧಾರಣೆ. ಪತ್ತು ಸಹಕಾರ ಎಲ್ಲಿ ಚೆನ್ನಾಗಿ ಬೇರೂರಿವುದೋ ಅಲ್ಲಿ ಆ ತಳಹದಿಯ ಮೇಲೆ ಇತರ ವಿಧವಾದ ಸಹಕಾರಸಂಸ್ಥೆಗಳು ಬೆಳೆಯುವುದು ಸುಲಭ. ಪತ್ತು ಸಂಘಗಳ ರಚನೆ ಮತ್ತು ಕಾರ್ಯನಿರ್ವಾಹ ಸುಲಭ; ಗ್ರಾಮಾಂತರದಲ್ಲಿ ವಾಸಿಸುವ ರೈತರ ಚೈತನ್ಯಕ್ಕೆ ಎಂದಿಗೂ ಮೀರಿದ್ದಲ್ಲ. ಮಾರಾಟ, ವಿಮಾ, ಉಗ್ರಾಣ ಮುಂತಾದ ಇತರ ಸಹಕಾರ ಉದ್ಯಮಗಳು ರಚನೆಯಲ್ಲೂ

ನಿರ್ವಾಹದಲ್ಲೂ ತೊಡಕಾದುವು. ಇವುಗಳ ನಿಭಾವಣೆ ಕೆಲವು ವೇಳೆ ನುರಿತ ಸಹಕಾರಿಗಳಿಗೂ ಕಷ್ಟಸಾಧ್ಯ. ಪತ್ತು ಸಹಕಾರದ ಅನುಭವವು ಈ ತೊಡಕಾದ ಉದ್ಯಮಗಳ ಬೆಳವಣಿಗೆಗೆ ಹೆದ್ದಾರಿ.

ಪತ್ತು ಸಹಕಾರವು ನಮ್ಮ ದೇಶದಲ್ಲಿ ಇಷ್ಟು ಸಹಜವಾಗಿ ಬೆಳೆದಿರುವುದಕ್ಕೆ ಇವೇ ಕಾರಣವೆನ್ನಬಹುದು. ಆದರೂ ಸುಧಾರಿಸಿದ ಆರ್ಥಿಕಜೀವನವು ಶಾಶ್ವತವಾಗಿ ನಮ್ಮ ರೈತರಿಗೆ ಸಿಕ್ಕಬೇಕಾದರೆ ನಮ್ಮ ದೇಶವೂ ಪಾಶ್ಚಾತ್ಯದೇಶಗಳ ಮೇಲ್ಪಂಕ್ತಿಯನ್ನನುಸರಿಸಿ ಲೇವಾದೇವಿ (ಪತ್ತು) ಸಂಘಗಳ ಜೊತೆಗೆ ವಿಧ ವಿಧವಾದ ಇತರ ಸಂಘಗಳನ್ನೂ ವೃದ್ಧಿಗೊಳಿಸಬೇಕು. ಈಚೆಗೆ ಈ ಮಾರ್ಗದಲ್ಲಿ ಖಾಸಗಿ ಸಹಕಾರಿಗಳೂ ಪ್ರಚಾರಸಂಘಗಳೂ ಪತ್ರಿಕೆಗಳೂ ಸರ್ಕಾರದೊಂದಿಗೆ ಶ್ರದ್ಧೆಯಿಂದ ಕಲೆತು ಚುರುಕಾದ ಚಳವಳಿ ನಡೆಸುತ್ತಿವೆ. ೧೯೩೧ ರಿಂದ ಈಚೆಗೆ ಆರ್ಥಿಕ ಮುಗ್ಗಟ್ಟು ತಲೆದೋರಿದಮೇಲಂತೂ ನಮ್ಮ ರೈತರ ಸ್ಥಿತಿಗತಿಗಳು ಅತಿ ಶೋಚನೀಯವಾದುವೆಂದು ಎಲ್ಲರಿಗೂ ಮನದಟ್ಟಾಗಿದೆ. ಇದರಿಂದ ಎಲ್ಲೆಲ್ಲೂ ಸುಧಾರಣೆಗಳ ಯೋಜನೆಗಳೂ ಹಲವೆಡೆಗಳಲ್ಲಿ ಹೊಸ ಹೊಸ ಪ್ರಯೋಗಗಳೂ ನಡೆಯುತ್ತಿವೆ. ೧೯೩೫ನೆಯ ಇಸವಿಯ ರಾಜಕೀಯ ಸುಧಾರಣೆಗಳ ಮೇರೆಗೆ ಪ್ರಾಂತೀಯ ಪ್ರಜಾಸರ್ಕಾರಗಳಿಗೆ ದೊರೆತಿರುವ ಸ್ವಾತಂತ್ರ್ಯ ಬಲದಿಂದ ಸುಧಾರಿಸಿದ ರೀತಿಯಲ್ಲಿ ಸಹಕಾರಸಂಘಗಳು ಬೆಳೆದು ಆ ಮೂಲಕ ಭಾರತೀಯರ ಆರ್ಥಿಕಜೀವನದ ಮಟ್ಟವು ಏರಬಹುದೆಂಬ ನಂಬಿಕೆ ಮೂಡುತ್ತಿದೆ.

ಬ್ರಿಟಿಷ್ ಪ್ರಾಂತಗಳಂತೆಯೇ ಮುಖ್ಯವಾದ ದೇಶೀಯ ಸಂಸ್ಥಾನಗಳೂ ಕಾನೂನುಗಳನ್ನೇರ್ಪಡಿಸಿ ಸಹಕಾರಪದ್ಧತಿಯ

ನ್ನಾಚರಣೆಗೆ ತಂದಿವೆ. ಇದರಲ್ಲಿ ಅಗ್ರಸ್ಥಾನವು ಮೈಸೂರು ದೇಶಕ್ಕೆ ಸಲ್ಲುವುದು. ನಮ್ಮ ಸಂಸ್ಥಾನದಲ್ಲೂ ೧೯೦೫ ರಲ್ಲಿ ಸಹಕಾರದ ಕಾನೂನು ಜಾರಿಗೆ ಬಂತು. ಇದಕ್ಕೆ ಮುಂಚೆಯೇ ಪ್ರಜಾಪ್ರತಿನಿಧಿಸಭೆಯ ಕೋರಿಕೆಯಂತೆ ಸರ್ಕಾರದವರು ೧೮೯೪ರಲ್ಲಿ ರೈತರ ಸಾಲದ ನಿವಾರಣೆಗಾಗಿ ವ್ಯವಸಾಯದ ಬ್ಯಾಂಕುಗಳನ್ನು ಏರ್ಪಡಿಸಿದರು. ಆ ವರ್ಷದ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನದ ಆರಂಭಭಾಷಣದಲ್ಲಿ ಆಗಿನ ದಿವಾನ ರಾಗಿದ್ದ ಸರ್. ಕೆ. ಶೇಷಾದ್ರಿ ಅಯ್ಯರವರು ಈ ಹೊಸ ಉದ್ಯ ಮಕ್ಕೆ ಸಂಬಂಧಿಸಿದ ಎಲ್ಲಾ ವಿವರಗಳನ್ನೂ ತಿಳಿಸಿರುವರು. ಇದನ್ನು ಓದಿದರೆ ಈ ವ್ಯವಸಾಯದ ಬ್ಯಾಂಕುಗಳು ಯೂರೋಪು ದೇಶದಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದ ಸಹಕಾರ ಸಂಘಗಳ ಮಾದರಿಗನುಸಾರವಾಗಿ ರಚಿತವಾದುವೆಂದು ಸ್ಪಷ್ಟಪಡುವುದು. ಉತ್ಸಾಹದಿಂದ ಕೈಕೊಂಡ ಈ ಹೊಸ ಉದ್ಯಮವು ಕಾರಣಾಂತರ ದಿಂದ ಫಲಕಾರಿಯಾಗದೆ, ಸ್ಥಾಪಿಸಲ್ಪಟ್ಟ ಎಲ್ಲಾ ಬ್ಯಾಂಕುಗಳೂ ಒಂದೊಂದಾಗಿ ಮುಚ್ಚಲ್ಪಟ್ಟುವು.

ಮೈಸೂರು ದೇಶದಲ್ಲಿ ಸಹಕಾರ ಕಾನೂನು ಜಾರಿಗೆ ಬರಲು ಒಂದೆರಡು ಖಾಸಗಿ ಪ್ರಯತ್ನಗಳು ಮುಖ್ಯ ಕಾರಣಗಳಾಗಿವೆ. ದೊಡ್ಡಬಳ್ಳಾಪುರದ ನೇಯಿಗೆಯವರು ಆಗಿನ ವಿದ್ಯಾಖಾತೆಯ ಮುಖ್ಯಾಧಿಕಾರಿಗಳ ಸಲಹೆಯನ್ನನುಸರಿಸಿ ಒಂದು ಸಹಕಾರ ಸಂಘವನ್ನೇರ್ಪಡಿಸಲು ಉದ್ದೇಶಿಸಿದರು. ಅದೇ ಸಮಯದಲ್ಲಿ ಬೆಂಗಳೂರಿನ ಹಲವು ಮಹನೀಯರು ನಿಯಮಿತ ಜವಾಬ್ದಾರಿ ಸಹಕಾರ ಸಂಘ ಒಂದನ್ನು ಸ್ಥಾಪಿಸಲುದ್ದೇಶಿಸಿ, ಅದರ ಸಂಘ ಸ್ಥಾಪನೆಗೂ ಮತ್ತು ಅದರ ನಡವಳಿಕೆಗೂ ಆವಶ್ಯಕವಾದ ಕಾನೂನು ಮೈಸೂರಿನಲ್ಲಿಯೂ ಏರ್ಪಡಬೇಕೆಂದು ಸರ್ಕಾರವನ್ನು

ಪ್ರಾರ್ಥಿಸಿ ಮನವಿಯೊಂದನ್ನು ಕಳುಹಿಸಿಕೊಟ್ಟರು.

ಮನವಿಯಲ್ಲಿ ಸಂಘದ ಉದ್ದೇಶಗಳು ಈ ರೀತಿ ನಮೂದಾಗಿವೆ:

೧. ಸದಸ್ಯರುಗಳಲ್ಲಿ ಮಿತವ್ಯಯದ ಅಭ್ಯಾಸ ಹರಡಲು ಉತ್ತೇಜನ ಕೊಡುವುದು.

೨. ವೃತ್ತಿ ಮತ್ತು ಉದ್ಯಮಗಳ ಅಭಿವೃದ್ಧಿಗೆ ಮತ್ತು ಗೃಹಕೃತ್ಯಕ್ಕೆ ಬೇಕಾದ ಸಾಲಗಳನ್ನು ಅವರಿಗೆ ಒದಗಿಸುವುದು.

೩. ಸದಸ್ಯರುಗಳಿಗೆ ಬೇಕಾದ ಆಹಾರಸಾಮಗ್ರಿಗಳನ್ನೂ ಇತರ ಆವಶ್ಯಕವಾದ ಸಾಮಾನುಗಳನ್ನೂ ರಾಶಿಯಲ್ಲಿ ಕೊಂಡು ಚಿಲ್ಲರೆಯಾಗಿ ಅವುಗಳ ಮಾರಾಟಕ್ಕೆ ಏರ್ಪಾಟು ಮಾಡುವುದು.

೪. ಸಾಧ್ಯವಾದಾಗ ಸದಸ್ಯರುಗಳು ಮನೆ ಕೊಳ್ಳಲು ಹಣವನ್ನೊದಗಿಸಿ ಅದನ್ನು ಹಲವು ಕಂತುಗಳಲ್ಲಿ ವಾಪಸು ಪಡೆಯುವುದು.

ಇಂಡಿಯಾ ಕಾನೂನಿನ ಮಾದರಿಯನ್ನನುಸರಿಸಿ ಇಲ್ಲಿಯೂ ಕಾನೂನು ಮಾಡಬೇಕೆಂದಿದ್ದ ಮೈಸೂರು ಸರ್ಕಾರಕ್ಕೆ ಈ ಮನವಿಯೂ ಬೆಂಬಲವಾದಂತಾಯಿತು. ೧೯೦೫ರಲ್ಲಿ ಮೈಸೂರಿನಲ್ಲಿ ಕಾನೂನು ಜಾರಿಗೆ ಬಂತು. ಮೈಸೂರಿನ ಕಾನೂನು ಇಂಡಿಯಾ ಕಾನೂನನ್ನು ಮಾದರಿಗಾಗಿ ಅನುಸರಿಸಿದ್ದರೂ ಒಂದೆರಡು ಮುಖ್ಯ ವಿಷಯಗಳಲ್ಲಿ ಉತ್ತಮ ರೀತಿಯ ಬದಲಾವಣೆಗಳನ್ನೊಳಕೊಂಡಿದೆ. ಇಂಡಿಯಾ ಕಾನೂನು ಸಹಕಾರ ಲೇವಾದೇವಿ (ಪತ್ತು) ಸಂಘಗಳಿಗೆ ಮಾತ್ರ ಅನ್ವಯಿಸತಕ್ಕದಾಗಿತ್ತು. ಆದರೆ ಮೈಸೂರಿನ ಕಾನೂನು ಎಲ್ಲಾ ವಿಧವಾದ ಸಂಘಗಳಿಗೂ ಅನ್ವಯಿಸುವಂತೆ ರಚಿಸಲ್ಪಟ್ಟಿತು. ಅಲ್ಲದೆ

ಇಂಡಿಯಾ ಕಾನೂನಿನಲ್ಲಿ ಮಾಡಿರುವಂತೆ ಹಳ್ಳಿಯ ಸಂಘಗಳು ಮತ್ತು ಪಟ್ಟಣದ ಸಂಘಗಳೆಂದು ವ್ಯತ್ಯಾಸಮಾಡದೆ ಮೈಸೂರು ದೇಶದ ಸ್ಥಿತಿಗತಿಗಳಿಗನುಗುಣವಾಗಿ ಒಂದೇ ತರಹ ಸಂಘಗಳಿಗೆ ಕಾನೂನುಮಾಡಲಾಯಿತು. ಈ ಮಾರ್ಪಾಡುಗಳು ೧೯೧೨ರಲ್ಲಿ ಇಂಡಿಯಾ ಕಾನೂನಿನಲ್ಲೂ ಸೇರಿಸಲ್ಪಟ್ಟುವು. ೧೯೦೫ ರಲ್ಲಿ ಆದ ಕಾನೂನು ಆಗಿಂದಾಗ್ಗೆ ತಿದ್ದುಪಡಿಯಾಗಿ ಪುನರ್ರಚಿತವಾಗುತ್ತಿದೆ.

ಮೈಸೂರು ಸಂಸ್ಥಾನದ ಕಾನೂನಿನ ಆಧಾರದಮೇಲೆ ಆರಂಭವಾದ ಮೊದಲನೆಯ ಸಂಘ "ಬೆಂಗಳೂರು ಸಿಟಿ ಕೋಆಪರೇಟಿವ್ ಸೊಸೈಟಿ." ಇದು ನಿಯಮಿತ ಜವಾಬ್ದಾರಿಯ ಸಂಘ. ಇದಾದನಂತರ ಸ್ಥಾಪಿತವಾದ ನಾಲ್ಕು ಸಂಘಗಳೂ ನಿಯಮಿತ ಜವಾಬ್ದಾರಿ ಸಂಘಗಳೇ. ಅನಿಯಮಿತ ಜವಾಬ್ದಾರಿಯ ತತ್ವವನ್ನನುಸರಿಸಿ ಏರ್ಪಾಟಾದ ಮೊದಲನೆಯ ಸಂಘ "ಮೊಳಕಾಲ್ಮುರುವಿನ ಕೃಷಿಕಸಹಾಯಕ ಸಂಘ." ಇದು ೧೯೦೭ನೆಯ ಅಕ್ಟೋಬರಿನಲ್ಲಿ ಸ್ಥಾಪಿತವಾಯಿತು. ಅಲ್ಲಿಂದೀಚೆಗೆ ಇಂಥಾ ಸಂಘಗಳು ಹೆಚ್ಚುಹೆಚ್ಚಾಗಿ ಬೆಳೆದುಬಂದಿವೆ.

ಮೂಲಸಹಕಾರಸಂಘಗಳು ಬೆಳೆದಮೇಲೆ ಅವುಗಳಿಗೆ ಹಣ ಒದಗಿಸಲು ಒಂದು ಕೇಂದ್ರ ಸಹಕಾರಸಂಸ್ಥೆಯ ಆವಶ್ಯಕತೆಯೊದಗಿತು. ಆದ್ದರಿಂದ ೧೯೦೯ ರಲ್ಲಿ "ಬೆಂಗಳೂರು ಸೆಂಟ್ರಲ್ ಕೋಆಪರೇಟಿವ್ ಬ್ಯಾಂಕು" ಸ್ಥಾಪಿತವಾಯಿತು. ಮತ್ತೊಂದು ಕೇಂದ್ರ ಸಂಸ್ಥೆಯು "ಮೈಸೂರು ಪ್ರೊವಿನ್ಷಿಯಲ್ ಕೋಆಪರೇಟಿವ್ ಏಪೆಕ್ಸ್ ಬ್ಯಾಂಕ್" ಎಂಬ ಹೆಸರಿನಿಂದ ೧೯೧೫ ರಲ್ಲಿ ಸ್ಥಾಪಿತವಾಯಿತು. ಇವೆರಡೂ ಸ್ವಲ್ಪಕಾಲ ಒಟ್ಟಿಗೆ ಕೆಲಸಮಾಡಿದ ಮೇಲೆ ನಮ್ಮ ದೇಶದಲ್ಲಿ

ಎರಡು ಕೇಂದ್ರಸಂಸ್ಥೆಗಳು ಅನಾವಶ್ಯಕವೆಂದು ವಿಶದ ವಾಯಿತು. ಬೆಂಗಳೂರು ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕು ಮೂಲಸಂಸ್ಥೆಯಾಗಿ ಬದಲಾಯಿಸಲ್ಪಟ್ಟಿತು. ಏಪೆಕ್ಸ್ ಬ್ಯಾಂಕ್ ಒಂದೇ ಕೇಂದ್ರಸಂಸ್ಥೆಯಾಗಿ ಉಳಿದಿದೆ. ೧೯೨೯ ರಲ್ಲಿ ಜಮೀನು ಅಡಮಾನದ ಬ್ಯಾಂಕ್ ಒಂದು ಆರಂಭವಾಗಿ ಜಮೀನುದಾರರಾದ ರೈತರನ್ನು ಸಾಲದಿಂದ ವಿಮುಕ್ತರನ್ನಾಗಿ ಮಾಡುವ ಕೆಲಸವನ್ನು ಕೈಕೊಂಡಿದೆ.

೧೯೩೭-೩೮ನೆಯ ಸಾಲಿನ ಕೊನೆಯಲ್ಲಿ ನಮ್ಮ ಸಂಸ್ಥಾನ ದಲ್ಲಿ ೧೪೪೫ ವ್ಯವಸಾಯ ಸಂಘಗಳೂ, ೪೩೫ ಇತರ ಸಂಘಗಳೂ ಕೆಲಸ ಮಾಡುತ್ತಿದ್ದುವು. ವ್ಯವಸಾಯ ಸಂಘಗಳ ಪೈಕಿ ೧೩೬೫ ಲೇವಾದೇವಿ (ಪತ್ತು) ಸಂಘಗಳಾಗಿವೆ. ಭರತ ಖಂಡದ ಇತರ ಪ್ರದೇಶಗಳಲ್ಲಿರುವಂತೆಯೇ ಇಲ್ಲಿಯೂ ಲೇವಾ ದೇವಿಸಂಘಗಳೇ ಪ್ರಬಲವಾಗಿವೆ. ಇತರ ವಿಧವಾದ ಸಂಘ ಗಳಲ್ಲಿ ಮೈಸೂರಿನಲ್ಲಿ ಪ್ರಾಮುಖ್ಯ ಪಡೆದಿರುವುವೆಂದರೆ ಸಹ ಕಾರಿ ಉಗ್ರಾಣಗಳು. ಸಂಸ್ಥಾನದ ಹಲವೆಡೆಗಳಲ್ಲಿ ಸಹಕಾರಿ ಉಗ್ರಾಣಗಳು ಉಪಯುಕ್ತ ಸೇವೆ ಸಲ್ಲಿಸುತ್ತಿವೆ. ಹತ್ತಾರು ಮಾರಾಟದ ಸಂಘಗಳು ಉತ್ತಮ ಕೆಲಸಮಾಡುತ್ತಿವೆ. ಮನೆ ಕಟ್ಟುವ ಸಂಘಗಳು ಹರಡುತ್ತಿವೆ. ಇನ್ನಿತರ ಸಂಘಗಳು ಅಭಿ ವೃದ್ಧಿಯಾಗುವುದಕ್ಕೂ ತಕ್ಕ ಪ್ರಚಾರಕಾರ್ಯವು ಬಹು ಚುರುಕಿ ನಿಂದ ನಡೆಯುತ್ತಿದೆ. ಎಲ್ಲಾ ಸಂಘಗಳ ಸದಸ್ಯರ ಸಂಖ್ಯೆಯು ಸುಮಾರು ಒಂದೂವರೆಲಕ್ಷವಿರುವುದು.

೧೯೨೦ರಲ್ಲಿ ಮೈಸೂರು ಸರ್ಕಾರದವರು ಲಲ್ಲೂಭಾಯಿ ಶಾಮುಲದಾಸ್ ಅವರ ಅಧ್ಯಕ್ಷತೆಯಲ್ಲಿ ಒಂದು ಪರಿಶೀಲನಾ ಸಮಿತಿಯನ್ನೇರ್ಪಡಿಸಿದರು. ಸಮಿತಿಯವರು ತಮ್ಮ ವರದಿ

ಯಲ್ಲಿ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿರುವರು. ಹದಿನೈದು ವರ್ಷಗಳಾದನಂತರ ೧೯೩೫ರಲ್ಲಿ ಮತ್ತೊಂದು ಪರಿಶೀಲನಾ ಸಮಿತಿಯು ಮಾಜಿ ಮುಖ್ಯ ನ್ಯಾಯಾಧೀಶರು ರಾಜಧರ್ಮಪ್ರವೀಣ ದಿವಾನ್‌ಬಹದ್ದೂರ್ ಕೆ. ಎಸ್. ಚಂದ್ರ ಶೇಖರ ಅಯ್ಯರ್ ಅವರ ಅಧ್ಯಕ್ಷತೆಯಲ್ಲಿ ಕೆಲಸ ನಡೆಸಿ ವರದಿ ಯನ್ನೊಪ್ಪಿಸಿತು. ಈ ಪರಿಶೀಲನಾ ಸಮಿತಿಗಳು ಕೊಟ್ಟ ಸಲಹೆ ಗಳಲ್ಲಿ ಹಲವು ಕಾರ್ಯರೂಪಕ್ಕೆ ಬಂದಿವೆ.

ಸರ್ಕಾರದ ಬೆಂಬಲವು ಈಗ ಹೆಚ್ಚಾಗಿದ್ದರೂ ಕಾಲಕ್ರಮ ದಲ್ಲಿ ಖಾಸಗಿ ಜನಗಳೇ ಹೆಚ್ಚು ಹೆಚ್ಚಾಗಿ ಸಹಕಾರ ಚಳವಳಿ ಯಲ್ಲಿ ಭಾಗ ವಹಿಸಿ ಸ್ವತಂತ್ರವಾಗಿ ನಡೆಸಿಕೊಂಡು ಬರಲೆಂ ಬುದೇ ಸರ್ಕಾರದ ಆಶಯ. ಇದನ್ನು ಈಡೇರಿಸಲು ೧೯೨೪ ರಲ್ಲಿ ಪ್ರಚಾರ ಸಂಘ ಒಂದನ್ನೇರ್ಪಡಿಸಲಾಯಿತು. ಸಹಕಾರದ ವಿಷಯವಾಗಿ ಭಾಷಣಗಳನ್ನೇರ್ಪಡಿಸುವುದು, ಪತ್ರಿಕೆಗಳ ಮೂಲಕ ಜನರಲ್ಲಿ ಸಹಕಾರದ ತಿಳಿವಳಿಕೆಯನ್ನು ಹೆಚ್ಚಿಸು ವುದು, ಸಂಘಗಳ ಕೆಲಸಗಳನ್ನು ಸಮರ್ಪಕವಾಗಿ ನಡೆಸಲು ಜನರಿಗೆ ಶಿಕ್ಷಣವನ್ನು ಏರ್ಪಡಿಸುವುದು —ಈ ಪ್ರಚಾರಕಾರ್ಯ ಗಳನ್ನು ಈ ಸಂಘವು ಕೈಕೊಂಡಿದೆ. ಈ ಸಂಸ್ಥೆಯ ಆಶ್ರಯ ದಲ್ಲೇ ವರ್ಷವರ್ಷವೂ ಸಹಕಾರ ಸಮ್ಮೇಳನವು ನಡೆಯುತ್ತಿ ರುವುದು. ಈ ಸಂಘದ ಪ್ರತಿನಿಧಿಯಾಗಿ ಚುನಾವಣೆಹೊಂದಿದವ ರೊಬ್ಬರಿಗೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಒಂದು ಸ್ಥಾನವಿದೆ.

ಮೈಸೂರು ದೇಶದಲ್ಲಿ ಸಹಕಾರ ಪದ್ಧತಿಗೆ ಸರ್ಕಾರದ ಉದಾರಪೋಷಣೆಯ ಜೊತೆಗೆ ರಾಜಾಶ್ರಯ ದೊರೆತಿರುವುದು ವಿಶೇಷ ಸಂಗತಿ. ಶ್ರೀಮನ್ಮಹಾರಾಜರ ಅರಮನೆಯ ನೌಕರರು ಗಳ ಸೌಕರ್ಯಕ್ಕಾಗಿ ಹಲವು ಸಹಕಾರ ಸಂಘಗಳು ಕೆಲಸಮಾಡು

ತ್ತಿರುವುವು. ಇವುಗಳ ಏಳಿಗೆಯಲ್ಲಿ ಮಹಾಸ್ವಾಮಿಯವರು ತೋರಿಸಿರುವ ಆಸಕ್ತಿಯು ಅತಿಶಯವಾದುದು.

ಸಹಕಾರ ಉದ್ಯಮಗಳಿಗೆ ಉತ್ತೇಜನವನ್ನೂ ಸಹಾಯವನ್ನೂ ದಯಪಾಲಿಸುವುದು ರಾಜಮನೆತನದ ಸಂಪ್ರದಾಯವಾಗಿದೆ. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರ ಮತ್ತು ಕೀರ್ತಿಶೇಷರಾದ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರವರ ಉದಾರಾಶ್ರಯವು ಸಹಕಾರಪದ್ಧತಿಗೆ ದೊರೆತಿದ್ದುದು ಭಾಗ್ಯವಿಶೇಷ. ಆಳಿದ ಮಹಾಸ್ವಾಮಿಯವರ ಕರುಣಾಕಟಾಕ್ಷದಿಂದ ಜನಿಸಿದ ಸಹಕಾರಸಂಘವೊಂದರ ಮೂಲಕ ಮೈಸೂರು ಚಾಮುಂಡಿಬೆಟ್ಟದ ತಪ್ಪಲಿನಲ್ಲಿರುವ ಲಲಿತಾದ್ರಿಪುರದಲ್ಲಿ ಅನೇಕ ಸುಧಾರಣೆಗಳು ನಡೆದು ಆ ಗ್ರಾಮವು ಹಳ್ಳಿಗಳಿಗೆಲ್ಲಾ ಮಾದರಿಯಾಗಿದೆ.

ಅನೇಕ ವರ್ಷಗಳು ಸಹಕಾರಿಗಳೊಡನೆ ಕಲೆತು ಕೆಲಸ ಮಾಡುತಿದ್ದ ಕೀರ್ತಿಶೇಷರಾದ ಶ್ರೀಮದ್ಯುವರಾಜರನ್ನು ಮೈಸೂರಿನ ಸಹಕಾರಪದ್ಧತಿಯ ಪೋಷಕರೆನ್ನಬೇಕು. ಸಹಕಾರ ಸಮ್ಮೇಳನಗಳ ಸಮಾರಂಭವನ್ನು ಅವರು ನಡೆಯಿಸಿ ಕೊಡುವುದು ವಾಡಿಕೆಯಾಗಿತ್ತು. ಅವರ ಭಾಷಣಗಳು ಅಮೋಘವಾದ ವಿಷಯಗಳನ್ನೊಳಕೊಂಡ ಆದರ್ಶ ಉಪದೇಶಗಳಾಗಿವೆ. ಅವರು ಆಗಾಗ್ಗೆ ಏರ್ಪಡಿಸುತ್ತಿದ್ದ ಔತನ ಆತಿಥ್ಯಗಳು ಸಂಸ್ಥಾನದ ಬೇರೆ ಬೇರೆ ಭಾಗಗಳ ಸಹಕಾರಿಗಳನ್ನು ಒಟ್ಟುಗೂಡಿಸುವ ಬಾಂಧವ್ಯದ ಸರಪಳಿಗಳಾಗಿದ್ದುವು. ಆಗಾಗ ಸಂಘಗಳಿಗೆ ಭೇಟಿಕೊಡುವುದರ ಮೂಲಕ ಅವುಗಳನ್ನು ಹೆಚ್ಚು ಶ್ರದ್ಧೆಯಿಂದ ಕೆಲಸ ಮಾಡುವಂತೆ ಪ್ರೋತ್ಸಾಹಿಸುತ್ತಿದ್ದರು. ದೇಶಾಂತರ ಸಂಚಾರ

ಕಾಲದಲ್ಲಿ ಅನೇಕ ವಿಷಯಗಳನ್ನು ಸಂಗ್ರಹಿಸಿ ನಮ್ಮ ಸಹಕಾರಿಗಳಿಗೆ ತಿಳಿವಳಿಕೆ ಕೊಟ್ಟಿರುವರು. ಉದಾರ ಮನಸ್ಸಿನಿಂದ ತಮ್ಮ ಹಣವನ್ನು ಸಹಕಾರ ಸಂಘಗಳ ಬಂಡವಾಳಕ್ಕೂ ಖರ್ಚಿಗೂ ಒದಗಿಸುತ್ತಿದ್ದರು. ಉತ್ತಮ ಕೆಲಸಮಾಡಿದ ಸಂಘಗಳಿಗೆ ಅವರು ದಯಪಾಲಿಸುತ್ತಿದ್ದ ವಿಶೇಷ ಬಹುಮಾನಗಳಿಂದ ಸಂಘಸಂಘಗಳಿಗೆ ಉತ್ತಮರೀತಿಯ ಪೈಪೋಟಿ ಹುಟ್ಟಿ ಸಂಘಗಳು ಅಭಿವೃದ್ಧಿಗೊಂಡುವು. ಒಟ್ಟಿನಲ್ಲಿ ಕೀರ್ತಿಶೇಷರಾದ ಶ್ರೀಮದ್ಯುವರಾಜರು ಸಹಕಾರ ಪದ್ಧತಿಯಲ್ಲಿರಿಸಿದ್ದ ದೃಢನಂಬಿಕೆಯೂ, ಅದರ ಬೆಳವಣಿಗೆಯಲ್ಲಿ ತೋರಿಸಿದ ತೀವ್ರ ಆಸಕ್ತಿಯೂ ಅದರ ಕಾರ್ಯರಚನೆಯಲ್ಲಿ ವಹಿಸಿದ್ದ ಶ್ರದ್ಧೆಯೂ ಸಹಕಾರಿಗಳಲ್ಲಿ ಇಟ್ಟಿದ್ದ ಭ್ರಾತೃವಾತ್ಸಲ್ಯವೂ ಎಲ್ಲರಿಗೂ ಮೇಲ್ಪಂಕ್ತಿಯಾದುದು. ಮೈಸೂರುದೇಶದ ಸಹಕಾರಿಗಳೆಲ್ಲರೂ ಅವರನ್ನು ಮಾರ್ಗದರ್ಶಕರೆಂದು ಪರಿಗಣಿಸಿ ಗೌರವ ಪ್ರೀತಿ ವಿಶ್ವಾಸಗಳಿಂದ ಕೂಡಿ ಅವರನ್ನು "ಮೈಸೂರು ದೇಶದ ಮುಖ್ಯ ಸಹಕಾರಿಗಳು" ಎಂದು ಕರೆಯುವುದು ವಾಡಿಕೆಯಾಗಿತ್ತು. ಅವರ ಅಮೋಘ ಸೇವೆಯು ಚಿನ್ನದ ಅಕ್ಷರಗಳಲ್ಲಿ ಕೆತ್ತಿಡತಕ್ಕದ್ದಾಗಿದೆ.

---

# ೫. ಉಪಸಂಹಾರ

ಸಹಕಾರಪದ್ಧತಿಯ ಮೂಲತತ್ವಗಳು ಜೀವನದ ಉಚ್ಚ ಧ್ಯೇಯಗಳಾಗಿವೆ. ನಿತ್ಯಜೀವನದಲ್ಲೂ ಆರ್ಥಿಕ ವ್ಯವಹಾರದಲ್ಲೂ ಸಹಕಾರಿಗಳಲ್ಲಿ ಒಗ್ಗಟ್ಟು, ಸ್ವಾತಂತ್ರ್ಯ, ಶಾಂತಿ, ದಯೆ, ಧರ್ಮ ಮುಂತಾದ ಸದ್ಗುಣಗಳು ಕಂಡುಬರುವುವು. ಈ ಅಸ್ತಿಭಾರದಮೇಲೆ ಕಟ್ಟಿದ ಜೀವನಭವನವು ಎಂದಿಗೂ ಸಡಿಲುವುದಿಲ್ಲ; ಶಾಶ್ವತವಾಗಿ ನಿಲ್ಲುವುದು. ಈ ಧ್ಯೇಯಗಳ ಆಧಾರದಮೇಲೆ ಅಂತರ್ರಾಷ್ಟ್ರೀಯ ಸೌಹಾರ್ದವನ್ನು ನಿರ್ಮಿಸುವುದು ಸಹಕಾರಿಗಳ ಉದ್ದೇಶ. ವಿಶ್ವಶಾಂತಿಯು ಶಾಶ್ವತವಾಗಿ ಬೆಳಗಬೇಕಾದರೆ ಸಹಕಾರ ತತ್ವಗಳ ಆಸರೆಯಲ್ಲದೆ ಬೇರೆ ಮಾರ್ಗವಿರುವುದಿಲ್ಲ. ಈ ಪದ್ಧತಿಯು ಪ್ರಪಂಚದ ಅನೇಕ ದೇಶಗಳಲ್ಲಿ ಹಬ್ಬಿಹರಡಿರುವುದು ಉತ್ತರೋತ್ತರ ಸ್ಥಾಪಿತವಾಗಬೇಕಾದ ಅಂತರ್ರಾಷ್ಟ್ರೀಯ ವಿಶ್ವಾಸ ಮತ್ತು ಮಧುರಬಾಂಧವ್ಯಗಳ ಸಾಧನೆಗೆ ಬಹಳ ಸಹಾಯಕವಾಗಿದೆ. ಸಹಕಾರಪದ್ಧತಿಗೆ ಪ್ರತಿಕಕ್ಷಿಗಳಾಗಿ ಸ್ಪರ್ಧಿಸುತ್ತಿರುವ ಬಂಡವಾಳಗಾರರ ಪ್ರಭುತ್ವಕ್ರಮ ಮತ್ತು ಸಮಾಜ ಸಮತಾವಾದ ಕ್ರಮ—ಈ ಎರಡೂ ಪರಸ್ಪರ ವೈರಿಗಳಾಗಿ ಕಾದಾಡುತ್ತಿರುವ ಕಾಲದಲ್ಲಿ ಸಹಕಾರಪದ್ಧತಿಯ ಕೋಮಲಗುಣಗಳು ಪ್ರಕಾಶಕ್ಕೆ ಬರಲು ಅವಕಾಶವಿಲ್ಲದಿರಬಹುದು. ಆದರೆ ನಿರ್ದೋಷವೂ ನಿರ್ವಿವಾದವೂ ಆದ ತತ್ವಗಳನ್ನೊಳಕೊಂಡ ಸಹಕಾರಪದ್ಧತಿಗೆ ಅಂತ್ಯಜಯವು ಖಂಡಿತ. ಸಹಕಾರ ಪದ್ಧತಿಯ ಧ್ಯೇಯಗಳನ್ನೆದುರಿಸಲು ಇದುವರೆಗೆ ಯಾರಿಗೂ ಸಾಧ್ಯವಾಗಿರುವುದಿಲ್ಲ.

ಸಹಕಾರಿಗಳು ತಮ್ಮ ಪದ್ಧತಿಯ ಗುರಿ, ಉದ್ದೇಶ ಮತ್ತು

ಸಾಧನಮಾರ್ಗವನ್ನು ಸೂಚಿಸಲು ಕಾಮನಬಿಲ್ಲಿನ ಬಣ್ಣಗಳ ನ್ನೊಳಕೊಂಡ ಧ್ವಜವನ್ನು ಸಂಕೇತವಾಗಿ ಇಟ್ಟುಕೊಂಡಿರು ವರು. ವಿವಿಧ ಬಣ್ಣಗಳು ವಿವಿಧರಾಷ್ಟ್ರಗಳ ಸಂಕೇತ. ಈ ವಿವಿಧ ಬಣ್ಣಗಳು ಮಿಳನವಾಗಿ ಹೇಗೆ ಶುದ್ಧವಾದ ತೇಜಸ್ಸನ್ನು ಉಂಟುಮಾಡಬಲ್ಲವೋ ಅದೇ ರೀತಿ ಸಹಕಾರ ಪದ್ಧತಿಯು ಎಲ್ಲ ದೇಶದವರ ಧ್ಯೇಯಗಳನ್ನೂ ಸಮ್ಮೇಳನಗೊಳಿಸಿ ಅಂತರಾಷ್ಟ್ರೀಯ ಐಕ್ಯವನ್ನು ಸಾಧಿಸಬಲ್ಲದು. ವಿವಿಧ ಬಣ್ಣಗಳ ಮಿಳನ ದಿಂದುಂಟಾಗುವ ಶ್ವೇತವರ್ಣವು ಸಹಕಾರಪದ್ಧತಿಯ ಧ್ಯೇಯ ಗಳ ಪರಿಶುದ್ಧತೆಯನ್ನು ಸಂಕೇತಿಸುವುದು. ಈ ಧ್ವಜದಡಿಯಲ್ಲಿ ಸಹಕಾರಿಗಳೆಲ್ಲರೂ ಸೇರಿ ವರ್ಷವರ್ಷವೂ ತಮ್ಮ ಪದ್ಧತಿಯ ಮೂಲಕ ಭ್ರಾತೃಭಾವವು ಹೇಗೆ ವ್ಯಾಪಿಸಿದೆ ಎಂಬುದನ್ನು ತಿಳಿ ಯಲು ಅಂತರರಾಷ್ಟ್ರೀಯ ಸಹಕಾರೋತ್ಸವವನ್ನು ಎಲ್ಲಾ ದೇಶಗ ಳಲ್ಲೂ ನಡೆಸುವುದು ಆಚರಣೆಗೆ ಬಂದಿದೆ. ಈ ಉತ್ಸವವನ್ನು ಭರತ ಖಂಡದಲ್ಲಿ ನವೆಂಬರ್ ತಿಂಗಳಿನ ಮೊದಲನೆಯ ಶನಿವಾರ ಆಚ ರಿಸುವರು. ಅಂದು ದೇಶದ ಆದ್ಯಂತವೂ ಸಹಕಾರಿಗಳೆಲ್ಲರೂ ಕಲೆತು ಸಹಕಾರ ಪದ್ಧತಿಯ ಪ್ರಚಾರಕಾರ್ಯವನ್ನು ಕೈಕೊಂಡು ಸಹಕಾರಪದ್ಧತಿಯ ಉಚ್ಚಧ್ಯೇಯಗಳನ್ನೂ ಅದರ ವಿಶ್ವವ್ಯಾಪನೆ ಯನ್ನೂ ವಿಶ್ವಸಹಕಾರಿಗಳ ಭ್ರಾತೃತ್ವವನ್ನೂ ಪುನಃ ಸ್ಮರಿಸಿ ಮನದಟ್ಟು ಮಾಡಿಕೊಂಡು ಅಂತರಾಷ್ಟ್ರೀಯ ಸೌಹಾರ್ದ ಸುಖ ಶಾಂತಿಗಳ ಸಾಧನೆಗೆ ಸಹಕಾರ ಮಾರ್ಗವಲ್ಲದೆ ಬೇರೆ ದಾರಿಯಿಲ್ಲವೆಂಬುದನ್ನು ದೃಢಪಡಿಸಿ ಸರ್ವರಿಗೂ ಮಂಗಳ ಉಂಟಾಗಲೆಂದು ಪ್ರಾರ್ಥನೆ ಸಲ್ಲಿಸುವುದು ವಾಡಿಕೆಯಾಗಿದೆ.

---

# ಸಹಕಾರ ಗೀತ

೧

ಮಳೆಬಿಲ್ಲ ಬಣ್ಣದಲಿ ಮಿರುಗುವಾಶಾಧ್ವಜವ
ತಳೆದು ನಾಗರಿಕತೆಯ ಹಾದಿ ಹಿಡಿದು,
ಒಂದೆ ಗುರಿಯನು ನಂಬಿ, ಸಹಕಾರರಥವಿದನು
ಮುಂದುಮುಂದಕೆ ನಡಸುತಿರುವವರಿಗೆ—
ನಾವಿಂದು ಬಾಗುವೆವು ಸೋದರ ಸ್ನೇಹದಲಿ
ಈ ವಿಶ್ವದೆಲ್ಲ ಸಹಕಾರಿಗಳಿಗೆ.

೨

ಬೆಳೆದು ಕೊಡುವನಿಗಿಲ್ಲ, ಕೊಂಡುಣ್ಣುವನಿಗಿಲ್ಲ;
ಗಳಿಸುವನು ಲಾಭವನು ನಡುವಣವನು !
ಕೂಡಿ ಕೊಳ್ಳುವ ಮಂತ್ರವನು ಜಪಿಸಿ ಸಾಧಿಸುತ
ದೂಡಬೇಕೀ ನಮ್ಮ ದೌರ್ಬಲ್ಯವ
ಇಲ್ಲಿ ಸಿದ್ಧಿಗೆ ಹಗೆಗಳಡ್ಡ ಬರಲೇನಂತೆ ?
ಗೆಲ್ಲುವುದೆ ದಿಟ ಕೊನೆಗೆ ಸಹಕಾರವು !

೩

ಎತ್ತ ನೋಡಿದರತ್ತ ಮಿಡಿತೆ ನಾಲಿಟ್ಟಂತೆ
ಮುತ್ತಿಹರು ಲಾಭಕೋರರು ನೆಲವನು !
ಹದಗೆಟ್ಟ ಹುರುಡಿನಲಿ ನುಗ್ಗಿ ನೂಕುತ, ಜಗಕೆ
ಕದನರಂಗದ ಪಾಡನೊಡ್ಡಿರುವರು.
ದಹಿಸುವೀ ಘೋರದಿಂದಿಳೆಯನುಜ್ಜೀವಿಸಲು
ಸಹಕಾರವೊಂದೆ ನಮಗಮೃತಧಾರೆ.

೪

ಒಂದುಗೂಡಿರಿ ಜಗದ ಸಕಲ ಸಹಕಾರಿಗಳೆ,
ಎಂದಿಗೂ ಸಡಿಲದಿಹ ಮೈತ್ರಿಯೊಳಗೆ.
ಸ್ವಾತಂತ್ರ್ಯ ಶಾಂತಿ ದಯೆ ಧರ್ಮವನು ಶ್ರದ್ಧೆಯಲಿ,
ಪ್ರೀತಿಯಲಿ ರೂಢಿಸುವ ದೀಕ್ಷೆಗೊಳಿರಿ.
ಕದಲದೀ ತತ್ವಗಳೆ ದಿಟದ ನಾಗರಿಕತೆಯ
ಸದನವನು ನಿಲ್ಲಿಸುವ ಕಂಬಸಾಲು !

(ತೀ. ನಂ. ಶ್ರೀಕಂಠಯ್ಯ.)

